# ಸ್ಥಳೀಯ ಚರಿತ್ರೆಯಲ್ಲಿ ಹೆಳವರ ಪಾತ್ರ

(ಚರಿತ್ರೆ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರ ಪಡಿಸಿದ ಸಂಶೋಧನ ನಿಬಂಧ)


ಸಂಶೋಧಕರು

ಶ್ರೀ ಶಿವಾನಂದ ಮಾಯಪ್ಪ ಹೆಳವರ

ಹಾರೂಗೇರಿ

ಮಾರ್ಗದರ್ಶಕರು

ಡಾ.ಬಸವರಾಜ ಅಕ್ಕಿ

[illegible] ಸಂಶೋಧನ ಕೇಂದ್ರ, ಹಾರೂಗೇರಿ,

ಜಿ. ಬೆಳಗಾವಿ.







ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ,

ಹಾರೂಗೇರಿ, ಜಿ. ಬೆಳಗಾವಿ.

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ -೫೮೩೨೭೬

೨೦೧೧

# ಸ್ಥಳೀಯ ಚರಿತ್ರೆಯಲ್ಲಿ ಹೆಳವರ ಪಾತ್ರ

(ಚರಿತ್ರೆ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರ ಪಡಿಸಿದ ಸಂಶೋಧನ ನಿಬಂಧ)

ಸಂಶೋಧಕರು
ಶ್ರೀ ಶಿವಾನಂದ ಮಾಯಿಪ್ಪ ಹೆಳವರ
ಹಾರೂಗೇರಿ
ಮಾರ್ಗದರ್ಶಕರು

ಡಾ.ಬಸವರಾಜ ಅಕ್ಕಿ
*ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ, ಹಾರೂಗೇರಿ,*
*ಜಿ. ಬೆಳಗಾವಿ.*






**ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ, ಜಿ. ಬೆಳಗಾವಿ.**

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ –೫೮೩೨೭೬

೨೦೧೧

# ಪ್ರಮಾಣ ಪತ್ರ

**'ಸ್ಥಳೀಯ ಚರಿತ್ರೆಯಲ್ಲಿ ಹೆಳವರ ಪಾತ್ರ'** ಎಂಬ ಶೀರ್ಷಿಕೆಯ ನಿಬಂಧವನ್ನು ಡಾ.ಬಸವರಾಜ ಎನ್. ಅಕ್ಕಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, **ಹಾರೂಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.



ಸ್ಥಳ : ಹಾರೂಗೇರಿ
ದಿನಾಂಕ : ೧೦-೦೬-೨೦೧೧

**ಶ್ರೀ ಶಿವಾನಂದ ಎಂ.ಹೆಳವರ**
ಸಂಶೋಧನ ವಿದ್ಯಾರ್ಥಿ
ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ,
ಹಾರೂಗೇರಿ, ಜಿ. ಬೆಳಗಾವಿ.

# ದೃಡೀಕರಣ ಪತ್ರ

***ಶ್ರೀ ಶಿವಾನಂದ ಎಂ.ಹೆಳವರ*** ಇವರು ***'ಸ್ಥಳೀಯ ಚರಿತ್ರೆಯಲ್ಲಿ ಹೆಳವರ ಪಾತ್ರ'*** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ***ಹಾರೂಗೇರಿಯ ಶ್ರೀ ಬಿ.ಆರ್.*** ದರೂರ ***ಸಂಶೋಧನ ಕೇಂದ್ರದ*** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟವಾಗಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಧೃಡೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೧೦-೦೬-೨೦೧೧

**ಡಾ. ಬಸವರಾಜ. ಎನ್. ಅಕ್ಕಿ.**

ಮಾರ್ಗದರ್ಶಕರು

ಶ್ರೀ ಬಿ.ಆರ್.ದರೂರ ಸಂಶೋಧನ

ಕೇಂದ್ರ, ಹಾರೂಗೇರಿ, ಜಿ. ಬೆಳಗಾವಿ.

# ಪರಿವಿಡಿ

## ಅಧ್ಯಾಯ-ಒಂದು

೧) ಪ್ರಸ್ತಾವಣೆ

೨) ಅಧ್ಯಯನದ ಉದ್ದೇಶ ವ್ಯಾಪ್ತಿ

೩) ಅಧ್ಯಯನದ ವಿಧಾನ

ಅ)ಚಾರಿತ್ರಿಕ ಅಧ್ಯಯನ

ಬ)ಸಂದರ್ಶನ ವಿಧಾನ

## ಅಧ್ಯಾಯ-ಎರಡು

### ಹೆಳವರೆಂದರೆ ಯಾರು?

೧) ಹೆಳವ ಪದದ ಉತ್ಪತ್ತಿ-ನಿಷ್ಪತ್ತಿ

೨) ಹೆಳವರೆಂದರೆ ಯಾರು.

೩) ಹೆಳವರ ಕುರಿತು ಇರುವ ಪುರಾಣಗಳು.

೪) ಹೆಳವ ಸಮುದಾಯ ಜಾಣಪದ ಹಿನ್ನೆಲೆಯ ಕಥೆಗಳು.

## ಅಧ್ಯಾಯ ಮೂರು

### ಹೆಳವ ಸಮುದಾಯದ ಸಾಮಾಜಿಕ ರಚನೆ

೧) ಹೆಳವರ ಸಾಮಾಜಿಕ ರಚನೆ.

೨) ಹೆಳವರ ಪಂಗಡಗಳು ಮತ್ತು ಉಪ ವೃತ್ತಿಗಳು.

೩) ಹೆಳವ ಸಮುದಾಯದ ಬೆಡಗುಗಳು.

## ಅಧ್ಯಾಯ ನಾಲ್ಕು

### ಹೆಳವರ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ

೧) ಕುಟುಂಬ ವ್ಯವಸ್ಥೆ.

೨) ಆರ್ಥಿಕ ಸ್ಥಿತಿಗತಿ ಮತ್ತು ಶಿಕ್ಷಣ.

೩) ಹೆಳವರ ಭಾಷೆ.

೪) ಕುಲಕೊಂಡಾಡುವುದು.

೫) ಹೆಳವರ ಸಂಸ್ಕೃತಿ.

೧) ಜನನ ಸಂಸ್ಕಾರ

೨) ನಾಮಕರಣ

೩) ಮೈನೆರೆಯುವುದು.

೪) ಮದುವೆ

೬) ಹಬ್ಬಗಳ ಆಚರಿಸುವ ಪದ್ಧತಿ.

**ಅಧ್ಯಾಯ ಐದು**

ಸ್ಥಳೀಯ ಚರಿತ್ರೆಯಲ್ಲಿ ಹೆಳವರ ಪಾತ್ರ

**ಅಧ್ಯಾಯ ಆರು**

ಸಮಾರೋಪ

**ಅಧ್ಯಾಯ ಏಳು**

ಅನುಬಂಧನೆಗಳು

೧) ಫೋಟೋಗಳು.

೨) ಆಧಾರ ಗ್ರಂಥಗಳು

# ಅಧ್ಯಾಯ-ಒಂದು

೧) ಪ್ರಸ್ತಾವಣೆ

೨) ಅಧ್ಯಯನದ ಉದ್ದೇಶ ವ್ಯಾಪ್ತಿ

೩) ಅಧ್ಯಯನದ ವಿಧಾನ

ಅ)ಚಾರಿತ್ರಿಕ ಅಧ್ಯಯನ

ಬ)ಸಂದರ್ಶನ ವಿಧಾನ

## ಅಧ್ಯಾಯ ೧

# ಹೆಳವರ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ಪೀಠಿಕೆ :

ಪ್ರಾಚೀನ ಕಾಲದಲ್ಲಿ ಮಾನವ ತನ್ನ ಹೊಟ್ಟೆ ಪಾಡಿಗಾಗಿ ಕಾಡು ಮೇಡುಗಳಲ್ಲಿ ಅಲೇಯುತ್ತಿದ್ದಾಗ ಹೇರಳವಾಗಿ ದೊರೆಯುತ್ತಿದ್ದ ಹಣ್ಣು – ಹಂಪಲು ಗಡ್ಡೆ ಗೆಣಸುಗಳನ್ನು ತಿನ್ನುತ್ತಿದ್ದನು.ಹಳೆ ಮತ್ತು ಹೊಸ ಶಿಲಾಯುಗದ ಮಾನವರು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಕಲ್ಲಿನ ಆಯುಧಗಳನ್ನು ಉಪಯೋಗಿಸುತ್ತಿದ್ದರು. ಕಲ್ಲಿನ ಆಯುಧಗಳಿಂದ ಸಣ್ಣ ಪ್ರಾಣಿಗಳನ್ನು ಬೇಟೆಯಾಡಿ ಹಸಿಮಾಂಸ ತಿನ್ನುತ್ತಿದ್ದರು. ಎಳೆಗಳನ್ನು ಪಕ್ಷಿಗಳ ಗರಿಗೆಗಳನ್ನು ಗುಹೆಗಳನ್ನು ಬಂಡೆಗಳ ಸಂದುಗಳಲ್ಲಿ ಮರಗಳ ಪೋಟರೆಗಳಲ್ಲಿ ವಾಸಿಸುತ್ತಿದ್ದರು.ಅವರು ವಾಸಿಸಲು ನಿಗದಿತವಾದ ಸ್ಥಳಾವಕಾಶವನ್ನು ಮಾಡಿಕೊಂಡಿರಲಿಲ್ಲ ಆಹಾರ ಹುಡುಕುವುದಕ್ಕಾಗಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಅಲೆಮಾರಿಯಾಗಿ ತಿರುಗಾಡುತ್ತಿದ್ದರು.ಇದು ಅವರಿಗೆ ಅವಶ್ಯಕವು ಅನಿವಾರ್ಯವು ಆಗಿತ್ತು.ನಾಗರಿಕತೆ ಬೆಳೆದಂತಲ್ಲಾ ಭೂಮಿಯನ್ನು ಉತ್ತಿ ಬಿತ್ತಿ ಬೆಳೆಯುವ ಕೃಷಿ ವಿಧಾನಗಳನ್ನು ಅಲೇಮಾರಿಗಳು ಕರಗತ ಮಾಡಿಕೊಂಡರು,ನೀರು ನೆಲ ಉತ್ತಮವಾಗಿದ್ದ ಕಡೆ ಗುಡಿಸಲು ಕಟ್ಟಿಕೊಂಡು ತಮ್ಮ ಗುಂಪಿನವರ ಜೊತೆ ವಾಸಿಸಲು ಪ್ರಾರಂಭಿಸಿದರು ಮತ್ತೆ ಕೆಲವರು ಅಲೆಮಾರಿ ಬದುಕನ್ನು ತಮ್ಮ ಜೀವನದ ವಿಧಾನವನ್ನಾಗಿ ರೂಪಿಸಿಕೂಂಡರು.

"ಭಾರತದಲ್ಲಿ ವೇದಗಳ ಕಾಲದಿಂದಲೂ ಜಾತಿ ವ್ಯವಸ್ಥೆಯ ಅಸ್ತಿತ್ವದಲ್ಲಿದೆ.ಯಾವ ಜಾತಿಗೂ ಸೇರದ ಪ್ರತೇಕವಾಗಿ ಕಾಡುಗಳಲ್ಲಿ ಉಳಿದಿರುವ ಬುಡಕಟ್ಟುಗಲು ಸಾಕಷ್ಟು ಸಂಖ್ಯೆಯಲ್ಲಿವೆ ಭಾರತದ ಈ ಬುಟಕಟ್ಟುಗಳ ಸಂಸ್ಕ್ರತಿ ನಂಭಿಕೆಗಳು ಸಂಪ್ರದಾಯಗಳು ಸಾಹಿತ್ಯ ಸಂಗೀತ ನೃತ್ಯ ಕಲೆ ಕುಶಲ ಕಲೆ ಮೊದಲಾದ ಹಲವು ಅಂಶಗಳಿಂದ ಭಾರತದ ಸಂಸ್ಕ್ರತಿಯನ್ನು ಶ್ರೀಮಂತಗೊಳಿಸಿವೆ".೧

ಜಾತಿಗೂ – ಕಸಬಿಗೂ ಬಿಡಿಸಲಾಗದ ನಂಟು; ಎಂಬಂತೆ ಒಂದೊಂದು ಕುಲಕಸಬಿನವರು ಮಕ್ಕಳು ಅದೇ ಕಸೂಬಿನಲ್ಲಿ ಮುಂದುವರೆಯುತ್ತಾ ಬಂದರು. ಹೀಗೆ ವಂಶ ಪರಂಪರಾನುಗತವಾಗಿ ಜಾತಿ ಪದ್ದತಿ ರೂಢಿಯಲ್ಲಿ ಬಂದಿತು.ಅಲೆಮಾರಿ, ಅರೆ ಅಲೆಮಾರಿ, ಕುಲಗುಂಪು, ಬುಡಕಟ್ಟು ಕೃಷಿ, ಸಮುದಾಯ, ವೃತ್ತಿ ಗುಂಪುಗಳು, ಮುಂತಾಗಿ ಕಂಡು ಒಂದು ವಿಶಿಷ್ಟ ಸಮೂಹಸ್ಥಿತಿ ವಸತಿ ಕಲ್ಪನೆಯ ಕೃಷಿಕ ಗುಂಪನ್ನು ಹೊಂದಿಕೊಂಡೆ ಜೀವನ ನಡೆಸುತ್ತಾ ಬಂದ ಹೆಳವರು ವಿವಿಧ ಪ್ರದೇಶದ ಬೇರೆ ಬೇರೆ ಸಮುದಾಯಗಳ ವೃತ್ತಿ ಗುಂಪುಗಳು

ಮುಂತಾಗಿ ಕಂಡು ಬರುವ ಕರ್ನಾಟಕದ ಜನಪದ ವೃಂದಗಳಲ್ಲಿ ಹೆಳವರದೊಂದು ವಿಶಿಷ್ಠ ಸಮೂಹ. ಸ್ಥಿರ ವಸತಿ ಕಲ್ಪನೆಯ ಕೃಷಿಕ ಗುಂಪನ್ನು ಹೊಂದಿಕೊಂಡೆ ಜೀವನ ನಡೆಸುತ್ತಾ ಬಂದ ಹೆಳವರು, ವಿವಿಧ ಪ್ರದೇಶದ ಬೇರೆ ಬೇರೆ ಆಯಾ ಸಮುದಾಯಗಳ ಕುಲ ಕೊಂಡಾಡಿ, ತನ್ಮೂಕ ಆಯಾ ಪ್ರದೇಶದ ಪ್ರಭಾವಶಾಲಿ ಮನೆತನಗಳ ವಂಶಾವಳಿಯನ್ನು ತಮ್ಮ ಮೌಖಿಕ ಪರಂಪರೆಯ ಮೂಲಕ ಕಾಲಾನಂತರ ಚಿಪ್ಪೋಡುಗಳಲ್ಲಿ ದಾಖಲೆಗೊಳಿಸಿ ಕಾಪಾಡಿಕೊಂಡು ಬಂದ ಹಿರಿಮೆ ಇವರದಾಗಿದೆ. ಕುಲ ಕೊಂಡಾಡುವುದನ್ನೇ ತಮ್ಮ ಮುಖ್ಯ ವೃತ್ತಿಯನ್ನಾಗಿ ಸ್ವೀಕರಿಸಿದ ಹೆಳವರು, ತಮ್ಮ ಉಪಜೀವನಕ್ಕೆ ಈ ವೃತ್ತಿಯನ್ನೆ ಹೆಚ್ಚಾಗಿ ಅವಲಂಬಿಸಿದ್ದು ಕಂಡು ಬರುತ್ತದೆ.ನಾಗರಿಕತೆಯ ವಿಕಾಸದ ವಿವಿಧ ಘಟ್ಟಗಳಲ್ಲಿ ಹಾಯ್ದು ಬಂದ ಈ ಜನಪದ ತಮಗೆ ಎದುರಾದ ಅನೇಕ ಬಗೆಯ ಆರ್ಥಿಕ ಮುಗ್ಗಟ್ಟಿನ ಸಂದರ್ಭದಲ್ಲು ಕುಲಕೊಂಡಾಡುವ ವೃತ್ತಿಯನ್ನು ಬಿಟ್ಟು ಕೊಟ್ಟವರಲ್ಲ.

"ಹೆಳವರು ಮೂಲತಃ ಅಲೆಮಾರಿ ಗುಂಪಿನವರಾಗಿದ್ದು ಮೊದ ಮೊದಲು ಬೇಕೆಂದಾಗ ಮಡಚಿಕಟ್ಟಿ ಎತ್ತಿಕೊಂಡು ಹೋಗಬಹುದಾದ ಹೆಣೆದ ಕಡ್ಡಿ ಚಾಪೆ ಈಚಲು ಚಾಪೆಯ ಗುಡಿಸಲು, ಕಾಲಾನಂತರ ಬಟ್ಟೆಯ ಡೇರೆಗಳನ್ನು ಇತ್ತೀಚಿಗೆ ಎತ್ತಿನ ಬಂಡಿಗಳನ್ನು ತಮ್ಮ ತಾತ್ಪೂರ್ತಿಕವಾಗಿ ವಾಸ ಸ್ಥಳಗಳನ್ನು ಮಾಡಿಕೊಳ್ಳುತ್ತಿದ್ದರು. ಕಾಲ ಬದಲಾದಂತೆ ಇವರು ನಾಲ್ಕಾರು ಗುಡಿಸಲು ಕಟ್ಟಿಕೊಂಡು ವಾಸಮಾಡುತ್ತಾ ಹಳ್ಳಿಗಳ ಹುಟ್ಟಿಗೆ ಕಾರಣರಾದರು. ತಮ್ಮ ವೃತ್ತಿಗಾಗಿ ಆಗಾಗ ನಿಗದಿತ ಒಕ್ಕಲು ಮನೆಗಳಿಗೆ ಹೋಗುವುದು ಮತ್ತೆ ಮರಳಿ ಹುಟ್ಟಿಗೆ ಬರುವುದು ಹೀಗೆ ಅಲೆಮಾರಿಯಿಂದ ಅರೆಅಲೆಮಾರಿಯಾಗಿ ಮತ್ತೆ ಕೆಲವಡೆ ಸ್ಥಿರವಾಗಿ ಒಂದು ಕಡೆ ನಿಲ್ಲುತ್ತಾ ಅಲ್ಲಿಂದಲು ಬೇರೆ ಕಡೆ ಸಾಗುತ್ತಾ ಮುಂದುವರಿದು ಹೆಳವರುವಿವಿಧ ಗುಂಪುಗಳ ಜೊತೆಗೆ ಸಹಕಾರ ಸಹಬಾಳ್ವೆ ಅನ್ಯೋನೆತೆಯಿಂದ ಜೀವನ ನಡೆಸುತ್ತಾ ಬಂದಿದ್ದಾರೆ". ೨

## ೨) ಅಧ್ಯಯನದ ಉದ್ದೇಶ ವ್ಯಾಪ್ತಿ

ಇಂದಿಗೂ ಭಾರತದ ದುಡಿಯುವ ವರ್ಗಗಳಿಗೆ ಆರ್ಥಿಕ ಸ್ವಾವಲಂಬನೆ ಇಲ್ಲ–ಇಲ್ಲಿನ ಕೆಳಜಾತಿಗಳು ತಮ್ಮ ಪಾರಂಪರಿಕ ವೃತ್ತಿಗಳಲ್ಲಿಯೇ ಬದುಕುವ ಅನಿವಾರ್ಯತೆಯನ್ನು ಅನುಭವಿಸುತ್ತವೆ.ಅದರಲ್ಲೂ ಪಾರಂಪರಿಕ ವೃತ್ತಿಗಳಲ್ಲಿ ಬದುಕುತ್ತಿರುವುದು ಹೆಚ್ಚಾಗಿ ಕೆಳಜಾತಿಗಳು ಅದರಲ್ಲೂ ಅಲೇಮಾರಿಗಳು ಮತ್ತು ಅರೆ ಅಲೆಮಾರಿಗಳು ಇವರು ತಮ್ಮ ಪಾರಂಪರಿಕ ಕಸೂಬುಗಳನ್ನು ಬಿಟ್ಟು ಕೊಡಕಲಾಗದ ಸ್ಥಿತಿಯಲ್ಲಿ ಈ ಸಮುದಾಯಗಳಿವೆ. ಇಂತಹ ಸಮುದಾಯಗಳಲ್ಲಿ ಹೆಳವ ಸಮುದಾಯವೂ ಒಂದು.

ಕರ್ನಾಟಕದ ಬಹುತೇಕ ಎಲ್ಲ ಜಿಲ್ಲೆಗಳಲ್ಲಿ ಇಂದು ಹೆಳವರು ವಾಸಿಸುತ್ತಿದ್ದಾರೆ.ಆಧುನಿಕ ಹೆಳವರಲ್ಲಿ ಅನೇಕ ವೃತ್ತಿಗಳನ್ನು ಅವಲಂಬಿಸಿರುವವರಿದ್ದಾರೆ. ಪ್ರಸ್ತುತ ಅಧ್ಯಯನವು ಹೆಳವ ಸಮುದಾಯದ ಚಾರಿತ್ರಿಕ ಬೆಳವಣಿಗೆ ಮತ್ತು ವರ್ತಮಾನದ ಸ್ಥಿತಿಗತಿಗಳನ್ನು ವಿವರಿಸಲು

ಪ್ರಯತ್ನಿಸುತ್ತದೆ.ಪ್ರಸ್ತೂತ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧) ಹೆಳವ ಸಮಾಜದ ಸಾಮಾಜಿಕ ಸ್ಥಿತಿಗತಿಗಳನ್ನು ವಿಶ್ಲಷೀಸುವುದು.

೨) ಹೆಳವ ಸಮುದಾಯದ ಆರ್ಥಿಕ ಬದುಕಿನ ರೂಪಾಂತರಗಳನ್ನು ಕಂಡುಕೊಳ್ಳುವರು,.

೩) ಹೆಳವ ಸಮುದಾಯದ ವರ್ತಮಾನದ ಸಾಮಾಜಿಕ ಸ್ಥಿತಿಗತಿಗಳನ್ನು ಮಇವರಿಸಿಕೊಳ್ಳುವುದು.

೪) ಹೆಳವ ಸಮುದಾಯದ ಚಾರಿತ್ರಿಕ ಬೆಳವಣಿಗೆಯನ್ನು ವಿಶ್ಲೇಷಿಸುವುದು.

೫) ಹೆಳವ ಸಮುದಾಯದ ಶಿಕ್ಷಣದ ಸ್ಥಿತಿಗತಿಗಳನ್ನು ವಿವರಿಸುವುದು.

೬) ಸ್ಥಳೀಯ ಚರಿತ್ರೆಯನ್ನು ರಚಿಸುವುದರಲ್ಲಿ ಅವರ ಪಾತ್ರ ವಿವರಿಸುವುದು.

**ವ್ಯಾಪ್ತಿ :-**

ಹೆಳವರು ಕರ್ನಾಟಕದ ೩೦ ಜಿಲ್ಲೆಗಳಲ್ಲಿ ವಾಸಿಸುತ್ತಿದ್ದಾರೆ.೨೦೦೫ ನೇ ಇಸ್ವಿಯಲ್ಲಿ ಕರ್ನಾಟಕ ರಾಜ್ಯ ಹೆಳವರ ಸಂಘ ನಡಸಿದ ಜನಗಣತಿ ಪ್ರಕಾರ ಬೆಳಗಾವಿ ಜಿಲ್ಲೆಯಲ್ಲಿ ಸುಮಾರು ಹತ್ತುಸಾವಿರ ಜನಸಂಖ್ಯೆ ಇದೆ. ಬೆಳಗಾವಿ ಜಿಲ್ಲೆಯಲ್ಲಿ ರಾಯಬಾಗ ತಾಲೂಕು ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ತಾಲೂಕಾಗಿದೆ ತಾಲೂಕಿನಲ್ಲಿ ಸುಮಾರು ೨೫೦೦ ಜನಸಂಖ್ಯೆಯಿದೆ. ತಾಲೂಕಿನ ೧೨ ಊರುಗಳಲ್ಲಿ ಹೆಳವರು ವಾಸಿಸುತ್ತಿದ್ದಾರೆ.ಹೆಳವ ಸಮುದಾಯ ಸ್ಥಳಿಯವಾಗಿ ಚರಿತ್ರೆಯನ್ನು ನಿರ್ಮಿಸುವಲ್ಲಿ ಅವರ ಪಾತ್ರವೇನು ಎಂಬುದು ನನ್ನ ಅಧ್ಯಯನದ ವ್ಯಾಪ್ತಿಗೆ ಬರುತ್ತದೆ.

**ಅಧ್ಯಯನದ ವಿಧಾನ :-**

ಮುಖ್ಯವಾಗಿ ಇದು ಕ್ಷೇತ್ರ ಕಾರ್ಯದಾರಿತ ಅಧ್ಯಯನದ ವಿಧಾನವಾಗಿದೆ ಈಗಾಗಲೇ ಹಲವಾರು ವಿದ್ವಾಂಸರು ಈ ಸಮುದಾಯದ ಮೇಲೆ ಅಧ್ಯಯನ ಮಾಡಿದ್ದಾರೆ. ಆ ಅಧ್ಯಯನಗಳನ್ನು ಗಮನಿಸಿ ಅದರ ಹಿನ್ನಲೆಯಲ್ಲಿ ಬೆಳಗಾವಿ
ಜಿಲ್ಲೆಯ ರಾಯಬಾಗ ತಾಲೂಕಿನ ಬೇರೆ-ಬೇರೆ ಊರುಗಳಲ್ಲಿರುವ ಈ ಸಮುದಾಯದ ಜನರ ಆರ್ಥಿಕಸಾಮಾಜಿಕ ಶೈಕ್ಷಣಿಕ ಹಾಗೂ ಸ್ಥಿತಿಗತಿಗಳನ್ನು ಆಧ್ಯಯನ ಮಾಡುವ ಸಲುವಾಗಿ ಈ ಕೆಳಗಿನ ವಿಧಾನಗಳನ್ನು ಆಯ್ಕೆ ಮಾಡಿಕೊಳ್ಳಬಾಗಿದೆ.

**ಚಾರಿತ್ರಿಕ ಅಧ್ಯಯನ :-**

ಪ್ರಸ್ತುತ ಅಧ್ಯಯನದಲ್ಲಿ ಹೆಳವ ಸಮುದಾಯದ ಚಾರಿತ್ರಿಕ ಬೆಳವಣಿಗೆಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ ಹೆಳವ ಸಮುದಾಯವು ಭಾರತದ ಪಾರಂಪರಿಕ ಸಮಾಜದಲ್ಲಿ ಬೆಳೆದು ಬಂದ ಬಗೆಯನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇಲ್ಲಿಯವರೆಗೆ ಪ್ರಸ್ತೂತ ಸಮುದಾಯದ ಮೇಲೆ ನಡೆದ ಅಧ್ಯಯನಗಳನ್ನು ಗಮನಿಸಲಾಗಿದೆ.ಜೊತೆಗೆ ಬೇರೆ ಬೇರೆ ಸಾಹಿತ್ಯ ಕೃತಿಗಳಲ್ಲಿ ಹೆಳವರ ಕುರಿತು ಇರುವ ಉಲ್ಲೇಖಗಳನ್ನು ಬಳಸಿಕೊಳ್ಳಲಾಗಿದೆ ಏಕೆಂದರೆ ಪಾರಂಪರಿಕ

ಸಮಾಜದಲ್ಲಿ ಬದುಕುವ ಸಮುದಾಯಗಳ ವರ್ತಮಾನದ ಬದುಕಿನ ಗುಟ್ಟುಗಳು ಬಹುತೇಕ ಚರಿತ್ರೆಯಲ್ಲಿ ಅಡಗಿರುತ್ತದೆ ಈ ಕಾರಣದಿಂದಾಗಿ ಚಾರಿತ್ರಿಕ ಭೌತವಾದದ ಹಿನ್ನೆಲೆಯಲ್ಲಿ ಹೆಳವ ಸಮುದಾಯದ ಚಾರಿತ್ರಿಕ ರೂಪಾಂತರಗಳನ್ನು ಅಧ್ಯಯನಕ್ಕೊಳಪಡಿಸಲು ಪ್ರಯತ್ನಿಸಲಾಗಿದೆ.

## ೨) ಸಂದರ್ಶನ ವಿಧಾನ:-

ರಾಯಬಾಗ ತಾಲೂಕಿನಾದ್ಯಾಂತ ಇರುವ ಹೆಳವ ಸಮುದಾಯದ ವಿವಿಧ ಗುಂಪುಗಳ ಆಯ್ದ ವ್ಯಕ್ತಿಗಳನ್ನು ಸಂದರ್ಶನಕ್ಕೆ ಒಳಪಡಿಸಲಾಗಿದೆ. ಪ್ರಸ್ತುತ ಸಂದರ್ಶನದ ಮೂಲಕ ಒಬ್ಬ ವ್ಯಕ್ತಿಯನ್ನು ಮುಖ್ಯವಾಗಿಟ್ಟುಕೊಂಡು ಸಮುದಾಯದ ಒಟ್ಟಾರೆ ತಿಳುವಳಿಕೆಯನ್ನು ಸಂಗ್ರಹಿಸಲಾಗಿದೆ ಈ ಸಲುವಾಗಿ ಪ್ರಶ್ನಾವಳಿಯನ್ನು ರೂಪಿಸಕೊಳ್ಳಲಾಗಿದೆ.ಈ ವಿಧಾನದ ಮೂಲಕ ವಿವಿಧ ವ್ಯಕ್ತಿಗಳನ್ನು ಸಂದರ್ಶನಕ್ಕೆ ಒಳಪಡಿಸಲಾಗಿದೆ.ಈ ಸಂದರ್ಶನದ ವಿಧಾನದ ಮೂಲಕ ಪಡೆದ ಅನುಭವಗಳನ್ನು ಪ್ರಸ್ತೂತ ಅಧ್ಯಯನದಲ್ಲಿ ಮುಖ್ಯವಾಗಿ ಬಳಸಿಕೊಳ್ಳಲಾಗಿದೆ.

ಅಡಿ ಟಿಪ್ಪಣಿಗಳು

೧) ಡಾ.ಹರಿಲಾಲ್ ಕೆ ಪವಾರ್. "ಹೆಳವರ ಸಂಸ್ಕ್ರತಿ" ಪುಟ ೩.೧೯೯೩

೨) ಡಾ.ಹರಿಲಾಲ್ ಕೆ ಪವಾರ್. "ಹೆಳವರ ಸಂಸ್ಕ್ರತಿ" ಪುಟ ೬.೭ ೧೯೯೩

೩) ಎ ಎಸ್ ಪ್ರಭಾಕರ "ಹೆಳವರು" ಪುಟ ೩ ೨೦೧೦.



# ಅಧ್ಯಾಯ–ಎರಡು

## ಹೆಳವರೆಂದರೆ ಯಾರು?

೧) ಹೆಳವ ಪದದ ಉತ್ಪತ್ತಿ–ನಿಷ್ಪತ್ತಿ

೨) ಹೆಳವರೆಂದರೆ ಯಾರು.

೩) ಹೆಳವರ ಕುರಿತು ಇರುವ ಪುರಾಣಗಳು.

೪) ಹೆಳವ ಸಮುದಾಯ ಜಾಣಪದ ಹಿನ್ನೆಲೆಯ ಕಥೆಗಳು.

## ಅಧ್ಯಾಯ – ಎರಡು

## ಹೆಳವರು ಎಂದರೆ ಯಾರು?

೧) ಹೆಳವ ಪದದ ಉತ್ಪತ್ತಿ – ನಿಷ್ಪತ್ತಿ

'ಹೆಳವ' ಎಂಬ ಹೆಸರು ಈ ಸಮುದಾಯಕ್ಕೆ ಬಂದಿತು ಎಂಬುದನ್ನು ವಿಶ್ಲೇಷಿಸಲು ವಿದ್ವಾಂಸರು ಹಲವು ಪ್ರಯತ್ನಗಳನ್ನು ಮಾಡಿದ್ದಾರೆ.ಹೆಳವ ಪದದ ಹುಟ್ಟಿನ ಕುರಿತು ಅದರ ಪದಶಃ ಅರ್ಥದ ಕುರಿತು ಅನೇಕ ಜಿಜ್ಞಾಸೆಗಳು ನಡೆದಿವೆ ಮುಖ್ಯವಾಗಿ ಈ ಹೆಸರು ಸದರಿ ಸಮುದಾಯಕ್ಕೆ ಬರಲು ಕಾರಣವೇನು ಎಂಬ ಕುರಿತು ಚರ್ಚೆಗಳು ನಡೆದಿವೆ.

೧) 'ಹೆಳವ' ಎಂಬ ಪದದ ಶಬ್ದಕೋಶದ ಅರ್ಥವನ್ನು ಪರಿಗಣಿಸಿ ಮತ್ತು ಹೆಳವರ ಸೃಷ್ಠಿ ಪುರಾಣ ಅಂದರೆ ತಮ್ಮ ಹುಟ್ಟಿನ ಕುರಿತು ಹೇಳುವ ಮೌಖಿಕ ಚರಿತ್ರೆಯನ್ನು ಆಧರಿಸಿ ಕೆಲವರು ಚರ್ಚೆ ನಡೆಸಿದ್ದಾರೆ.

೨) ಹೆಳವ ಎಂಬ ಪದವು ಹೇಳುವವ ಎಂಬ ಪದದಿಂದ ನಿಷ್ಪತ್ತಿಯಾಗಿದೆ.ಎಂದು ಕೆಲವರು ಚರ್ಚಿಸಿರುವುದು ಕಂಡು ಬರುತ್ತದೆ.

'ಸಮುದಾಯಗಳ ಸಾಮಾಜಿಕ ಚರಿತ್ರೆಯನ್ನು ಬರೆಯುವಾಗ ಸಾಮಾನ್ಯವಾಗಿ ಸಾಮಾಜಿಕ ಮನಶಾಸ್ತ್ರಜ್ಞರು ಅಭಿಜಾತ ದಾಖಲೆಗಳನ್ನು ಹುಡುಕಿಕೊಂಡು ಹೋಗುವುದು ಸಾಮಾನ್ಯ ಈ ಅಭಿಜಾತ ದಾಖಲೆಗಳೆಂದರೆ ಮಹಾಕಾವ್ಯಗಳು, ಶಾಸನಗಳು, ಶಿಷ್ಠ ಪುರಾಣದಲ್ಲಿನ, ಉಲ್ಲೇಖಗಳು, ಉದಾಹರಣೆಗೆ ಪಂಪನ ಆದಿಪುರಾಣದಲ್ಲಿ ಯಾವುದಾದರೊಂದು ಸಮುದಾಯದ ಉಲ್ಲೇಖ ಮತ್ತು ಅವರ ವೃತ್ತಿಗೆ ಸಂಬಂದಿಸಿದ ಸಂಗತಿಗಳು ಉಲ್ಲೇಖಿತಗೊಂಡಿದ್ದರೆ ಅದೇ ಉಲ್ಲೇಖವನ್ನು ಆಧರಿಸಿ ಕೆಲವು ತೀರ್ಮಾನಗಳಿಗೆ ಬರುವುದು ಒಂದು ವಾಡಿಕೆಯಂತೆ ನಡೆದು ಬಂದಿದೆ.ಈ ಬಗೆಯ ದಾಖಲೆಗಲನ್ನು ನೆಚ್ಚಿಕೊಳ್ಳುವ ವಿದ್ವಾಂಸರು ತಾವು ಅಧ್ಯಯನ ಮಾಡುವ ಸಮುದಾಯವೇ ಶತಮಾನಗಳಿಂದ ಕಟ್ಟಿಕೊಂಡು ಬಂದ ಮೌಖಿಕ ಇತಿಹಾಸವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ ಆಯಾ ಕಾಲ ಘಟ್ಟದ ಸಾಮಾಜಿಕ ಚರಿತ್ರೆಯನ್ನು ಬರೆಯುವಾಗ ಲಿಖಿತ ಮತ್ತು ಶಿಷ್ಠ ಆಕರಗಳು ನಿಖರ ಮತ್ತು ನಂಬಲರ್ಹವಾದ ಚಿತ್ರಣ ನಿಡುತ್ತವೆ.ಎಂದು ಇಂದಿಗೂ ನಂಬಲಾಗುತ್ತದೆ'೧.

೨) ಹೆಳವರಎಂದರೆ ಯಾರು?

ಹೆಳವರೆಂದರೆ ಯಾರು? ಅವರಿಗೆ ಈ ಹೆಳವ ಎಂಬಹೆಸರು ಯಾಕಾಗಿ ಬಂದಿತು? ಎಂದು ತೀರ್ಮಾನಿಸುವಾಗಲೇ ಈ ಬಗೆಯ ಶೈಕ್ಷಣಿಕ ನಂಬಿಕೆ ಸಮುದಾಯದ ಕುರಿತು ವಿವಿಧ ವಿದ್ವಾಂಸರು ಈ ಕೆಳಗಿನಂತೆ ವಿವರಿಸಿದ್ದಾರೆ.

ಯಾರು ಈ ಹೆಳವರು?

ಕುಲವೆತ್ತಿ ಕೊಂಡಾಡೆವು ರಾಮೋ ರಾಮು

* * * * * * * *

ಕುಲವೆಂದು ಕುಲವಯ್ಯಾ
ನಿನ್ನ ಕುಲವನ್ನು ಹೊಗುಳೇನು

* * * * * * * *

ನಮ್ಮ ಹಾಲು ಅನ್ನ ಇಟ್ಟ ಮನೆ
ಹಾಲು ಸಾಗರವಾಗಲಿ ಬೆಣ್ಣಡ ಬೆಟ್ಟವಾಗಲಿ
ನೀವು ಸಾಲಗೇರಿ ಕಟ್ಟಿಸುವಂತಾವಗಾಗಲಿ
ಗಂಡು ಮಕ್ಕಳು ಘನವಂತರಾಗಲಿ
ದಂಡಿಗೆ ಧರ್ಮರಾಗಿ ಹಿಂಡೇರ ಕಟ್ಟಬರಲಿ
ಒಂದು ಮನೆಗೆ ಎರಡು ಮನೆ ಆಗಲಿ....

ಈ ಬಗೆಯಾಗಿ 'ಕುಲಕೊಂಡಾಡುವ' 'ಸತ್ತು ಕೆಟ್ಟೋರನ್ನು ಹೊಗಳುವ' 'ವಂಶದ ವೃತ್ತಾಂತ' ಹೇಳುವ ಹರಕೆ ನುಡಿಯುವ ಜನ ಯಾರು? ಗಂಟೆಯ ಕಿಣಿಕಿಣಿ ನಾದಕ್ಕೆ ದನಿಗೂಡಿಸಿ ಹಾಡಿ ತಮ್ಮ ಕುಳಗಳ ಮನಸ್ಸನ್ನು ಸೂರೆಗೊಂಡು 'ಪಾಲು ಕೆಳುವ ಹಕ್ಕು ಪಡೆದು ಈ ವಿಚಿತ್ರ ಜನ ಯಾರು'? ಎಲ್ಲಿಂದ ಬಂದರು? ಇವರು ನಿಜವಾಗಿ ಹೆಳವರೇ? ಇಲ್ಲದಿದ್ದರೆ ಹೆಳವ ಎಂದೇಕೆ ಕರೆದುಕೊಳ್ಳುತ್ತಾರೆ? ಹೆಳವ ಎಂಬ ಪದದ ಬಗ್ಗೆ ಬರೆಯುತ್ತಾ **E Thurston** ಅವರು ತಮ್ಮ The Castes and Tribes of southera india ಎಂಬ ಗ್ರಂಥದಲ್ಲಿ ಹೀಗೆ ಹೇಳುತ್ತಾರೆ. Helava which means alone fellow is the dream appiled the class of beggers is the who are supposed to beg onely from okkalingas They found disstribuater all over the (Mysore) state In the last census the cast was not Seperately treated but was in cluded under the begger class Prebably jogis

'ಥರ್ಸ್ಟನ್ ಅವರ ಮಾತಿನಿಂದ ಹೆಳವರ ವೃತ್ತಿ ಏನೆಂದು ಹೇಳಿದೋತಾಯಿತೇ ಹೊರೆತು ಅವರಿಗೆ ಹೆಳವ ಎಂಬ ಹೆಸರೇಕೆ ಬಂತು ಎಂಬುವುದನ್ನು ಹೇಳಿದಂತಾಗಲಿಲ್ಲ. ಅಲ್ಲದೇ ಹೆಳವರು ಬಿಕ್ಷೇ ಬೇಡುತ್ತಾರೆ. ಎಂಬ ಮಾತು ಸರಿ ಕಾಣುವುದಿಲ್ಲ ಏಕೆಂದರೆ ಈಗಳು ಹೆಳವರು ತಾವು ತಮ್ಮ ಕುಳಗಳಿಂದ ಪಡೆಯುವುದೆ ತಮ್ಮ ಪಾಲೇ ಹೊರತು ಬಿಕ್ಷೆ ಅಲ್ಲ ಎಂದು ಸಮರ್ಥಿಸಿಕೊಳ್ಳುತ್ತಾರೆ. ಹಳೆಯ ಕಾಲದ ರೀತಿ ನೀತಿಗಳು ಕುಸಿದು ಬೀಳುತ್ತಿರುವ ಈ ಕಾಲದಲ್ಲಿಯೂ ಹೊಟ್ಟೆ ಎಂತೆಂಥವರೂ ಬಿಕ್ಷೆ ಬೇಡುವಾಗಲೂ ಹೆಳವರು ತಾವು ಕೆಳುವುದು ಬೀಕ್ಷೆ ಅಲ್ಲ ತಮ್ಮ ಪಾಲಿನ ಹಕ್ಕು ಎಂದು ಹೇಳುವುದರಲ್ಲಿ ಏನಾದರೂ ವಿಶೇಷವಾದ ಕಾರಣ

ಇರಬೇಕು'೧.

ಹೆಳವರು ಕೇವಲ ಒಕ್ಕಲಿಗರಿಂದ ಮಾತ್ರ ಬಿಕ್ಷೆ ಬೇಡುತ್ತಾರೆ ಎಂಬ ಮಾತು ಸರಿಯಲ್ಲ ಅವರು ಒಕ್ಕಲಿಗರಿಂದಷ್ಟೇ ಅಲ್ಲದೆ ಕುರುಬರು, ಲಿಂಗಾಯತರು, ಹರಿಜನರು, ಜೈನರು, ಭೇಡರು, ಮುಸ್ಲಿರು ಮುಂತಾದ ಜಾತಿಗಲಿದಂಲೂ ಬೇಡುತ್ತಾರೆ ಮತ್ತು ಅವರಿಗೂ ಕುಲಗೋತ್ರ ಹೇಳುತ್ತಾರೆ ಕುಲಗೋತ್ರ ಹೇಳುವವರನ್ನು ಹೆಳವರು ಎಂದು ಕರೆಯುವರು.

೧೯೦೯ ರಲ್ಲಿ ದಕ್ಷಿಣ ಭಾರತದ ಆಧಿವಾಸಿಗಳು ಮತ್ತು ವಿವಿದ ಜಾತಿ ಸಮುದಾಯಗಳ ಅಧ್ಯಯನ ಕೈಗೊಂಡ ಎಡ್ವರ್ ಥರ್ಸಟನ್ ಅವರು ಹೆಳವರನ್ನು ಹೀಗೆ ವಿವರಿಸುತ್ತಾರೆ

'ಹೆಳವ' ಎಂದರೆ ಕಾಲಿಲ್ಲದವನು ಎಂದಥ್ ಹೆಳವೆರೆಂದರೆ ಬಿಕ್ಷೆ ಬೇಡುತ್ತಾ ಬದುಕುವ ಒಂದು ಜನವರ್ಗ ಇವರು ಮೈಸೂರು ಬಳ್ಳಾರಿ ಮುಂತಾದ ಜಿಲ್ಲೆಗಳಲ್ಲಿ ವಾಸಿಸುತ್ತಿದ್ದಾರೆ ಇವರು ಹಳ್ಳಿಗಳ ಚರಿತ್ರೆಯನ್ನು ಕಟ್ಟಿಕೊಂಡು ಬಂದಿದ್ದಾರೆ ಇವರು ಸಾಮಾನ್ಯವಾಗಿ ಎತ್ತಿನ ಮೇಲೆ ಹತ್ತಿಕೊಂಡು ಹಳ್ಳಿಗಳನ್ನು ಸುತ್ತುತ್ತಾರೆ ಹೀಗೆ ಎತ್ತಿನ ಮೇಲೆ ಹತ್ತಿಕೊಂಡು ತಮ್ಮ ಒಕ್ಕಲು ಮನೆಗಳಿಗೆ ಹೋಗುವಾಗ ತಮ್ಮ ಕಾಲುಗಳನ್ನು ಉಣ್ಣೆಯ ಚದಾರದಿಂದ ಮುಚ್ಚಿಕೊಂಡಿರುತ್ತಾರೆ. ಇವರು ತಮ್ಮ ಒಕ್ಕಲುತನ ಮನೆಗಳಿಗೆ ತೆರಳಿ ಅವರ ಕುಟುಂಬದ ಇತಿಹಾಸವನ್ನು ಹೇಳುತ್ತಾರೆ'.೨

'೧೯೩೦ ರಲ್ಲಿ ಮೈಸೂರಿನ ಆದಿವಾಸಿಗಳ ಮತ್ತು ಜಾತಿ ಸಮುದಾಯಗಳ ಅಧ್ಯಯನ ಮಾಡಿದ ಎಚ್ ವಿ ನಂಜುಂಡಯ್ಯಾ ಮತ್ತು ಅನಂತ ಕೃಷ್ಣ ಅಯ್ಯರ್ ಅವರು ಈ ಕೆಳಗಿನಂತೆ ಅಭಿಪ್ರಾಯ ಪಡುತ್ತಾರೆ.

"ಹೆಳವ ಎಂದರೆ ಕಾಲಿಲ್ಲದವನು ಎಂದರ್ಥ ಹೆಳವರೆಂದರೆ ಒಂದು ಬಿಕ್ಷುಕ ಜನವರ್ಗ ಇವರು ಒಕ್ಕಲಿಗರ ಮನೆಯಲ್ಲಿ ಮಾತ್ರ ಬಿಕ್ಷೆ ಬೇಡುತ್ತಾರೆ ಇವರು ರಾಜ್ಯದ ಎಲ್ಲ ಕಡೆ ವಾಸಿಸುತ್ತಾರೆ'೩.

'೧೯೨೨ ರಲ್ಲಿ ಬಾಂಬೇ ಪ್ರಾಂತ್ಯದ ಜನ ಸಮುದಾಯಗಳ ಅಧ್ಯಯನ ಮಾಡಿದ ಎಂಥೋವನ್ ಹೆಳವರನ್ನು ಕುರಿತು ಹೀಗೆ ವಿವರಿಸುತ್ತಾರೆ.

"ಹೆಳವರೆಂದರೆ ಲಾಲಿಲ್ಲದವರೆಂದು ಅರ್ಥ ಹೇಳವರು ಪಾರಂಪರೊಕ ಬೀಕ್ಷಾವೃತ್ತಿಯನ್ನು ಅನುಸರಿಸಿಕೊಂಡು ಬದುಕುತ್ತಿರುವ ಜನವರ್ಗವಾಗಿದೆ ಇವರು ಬೆಳಗಾಂ ಬಿಜಾಪುರ ದಾರವಾಡ ಮತ್ತು ಕರಾವಳಿ ಜಿಲ್ಲೆಗಳಲ್ಲಿ ವಾಸಿಸುತ್ತಿದ್ದಾರೆ ಹೆಳವರು ಹಿಂದೂಗಳಲ್ಲಿನ ಬಿಕ್ಷುಕ ಸಮುದಾಯವಾಗಿರುವ ಪಂಗುಲರನ್ನು ಕೆಲವು ಸಂಗತಿಗಳಲ್ಲಿ ಹೋಲುತ್ತಾರೆ ಇವರು ತಾವು ಲಿಂಗಾಯತರೆಂದು ಹೇಳಿಕೊಂಡರು ಲಿಂಗಾಯತರಿಗಿಂತ ಇವರು ಭಿನ್ನರು ಹೆಳವರು ತಾವೂ ನಿಜಾಮನ ರಾಜ್ಯ ಕಲ್ಯಾಣದಿಂದ ಬಂದವರೆಂದು ಹೇಳಿಕೊಳ್ಳುತ್ತಾರೆ'೪.

'ಬಿ.ಎಂ. ತೆಳಗಡಿಯವರು ಹೆಳವರನ್ನು ಕುರಿತು 'ಹೆಳವ ಹೆಳವಯ್ಯಾ ಒಕ್ಕಾಲ ಭೃಂಗಿ

ನಂದಿವಾಲ ಮೊದಲಾದ ಹೆಸರುಗಳಿಂದ ಇವರನ್ನು ಕರೆಯುತ್ತಾರೆ ಹೆಳವ ಶಬ್ಧಕ್ಕೆ ಕಾಲಿಲಲ್ಲದವ ಕುಂಟ ಅಂಗಹೀನ ಎಂಬ ಅರ್ಥವಿದೆ ಎಂದು ವಿವರಿಸುತ್ತಾರೆ.೫

'ನಿಂಗಣ್ಣ ಸಣ್ಣಕ್ಕಿಯವರು ಹೆಳವರಿಗೆ ಹೇಳುವವರು ಎಂಬುದು ಜಾನಪದ ನಾಲಿಗೆಯ ಮೇಲಿರುವ ಅರ್ಥ ಜೀವಂತವಾಗಿದೆ, ಏನನ್ನು ಹೇಳುವವರು? ಜನಾಂಗಗಳ ಕಥೆಗಳನ್ನು ಹೇಳುವರು ತಿಳಿಸುವವರು ಎಂಬುದು ಜನ ಮನಗಳಲ್ಲಿ ಗೊತ್ತಿರದ ವಿಷಯವಾಗಿದೆ'.೬

'ಪಿ.ಕೆ ರಾಜಶೇಖರ್ ಅವರ ವಿವರನೆ ಈ ರೀತಿ ಇದೆ "ಗಂಟೆ ಭಾರಿಕೊಂಡು ಕಿಣಿ ಕಿಣಿ ನಾದ ಮಾಡುತ್ತಾ ಕೊರಳಿನಲ್ಲೊಂದು ಬಾರಿ ಜೋಳಿಗೆಯನ್ನು ಹೊತ್ತು ದವಸ ಧಾನ್ಯಗಳನ್ನು ಹೂರನ್ನು ಬಸವನ ಹೆಗಲಲ್ಲಿ ಹಾಕಿ ಮನೆ ಮನೆಯ ಮುಂದೆ ನಿಂತು ಕುಲಪುರಾಣಗಳನ್ನು ಹೇಳುವರು ಹೆಳವರು'೭.

'ಕೆ.ಎಸ್.ಸಿಂಗ್‌ರವರು : ತಮ್ಮ ಇಂಡಿಯನ್ ಕಮ್ಯುನಿಟಿ ಗ್ರಂಥದಲ್ಲಿ ಹೀಗೆ ವಿವರಿಸುತ್ತಾರೆ ಹೆಳವ ಎಂಬ ಕರ್ನಾಟಕದ ಈ ಸಮುದಾಯಗಳನ್ನು ಆಂದ್ರಪ್ರದೇಶದಲ್ಲಿ ಪಿಚ್ಚಗುಂಟ್ಲ ಎಂದು ಮಹಾರಾಷ್ಟ್ರದಲ್ಲಿ ಹೆಳ್ವ ಎಂದು ಕರೆಯಲಾಗುತ್ತದೆ. ಹೆಳೆವ ಎಂದರೆ ಕುಂಟ ವ್ಯಕ್ತಿ ಎಂದು ಅರ್ಥ"೮

'ಪೀಪಲ್ ಆಪ್ ಇಂಡಿಯಾ ಮಾಲಿಕೆಯಲ್ಲಿ ತಮ್ಮ ಗ್ರಂಥದಲ್ಲಿ ಹೆಳವರನ್ನು ಕುರಿತು ಈ ರೀತಿ ವಿವರಿಸುತ್ತಾರೆ "ಒಕ್ಕಲಿಗರ ಒಂದು ವರ್ಗವೆಂದೇ ಇವರು ನಂಬುತ್ತಾರೆ ಹೆಳವನಾಗಿದ್ದ ಇವರ ಮೂಲ ಪುರುಷ ಒಕ್ಕಲಿಗರ ಮೂಲ ಪುರುಷರಲ್ಲಿ ಒಬ್ಬನೆಂದೂ ಅಂಗವಿಕಲನಾಗಿದ್ದುದರಿಂದ ಅವನು ಉಳಿದ ಸಹೋದರರನ್ನು ಆಶ್ರಯಿಸಿ ಜೀವಿಸಬೇಕಾಯಿತೆಂದು ಕಥೆಗಳಿವೆ ಕ್ರಮೇಣ ಈ ಹೆಳವನ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು ಬೆಳೆದು ಒಂದು ಪ್ರತೇಕ ವರ್ಗವಾಗಿಯೇ ಉಳಿದರು'.೯

'ಹಿರಿಯ ಜಾನಪದ ವಿದ್ವಾಂಸದ ಎಚ್,ಎಲ್,ನಾಗೇಗೌಡರು ಹೆಳವರು ಬಹತೇಕ ಎಲ್ಲ ಐತಿಹ್ಯ ದಂತಕಥೆಗಳನ್ನು ಗಮನದಲ್ಲಿಟ್ಟುಕೊಂಡು ಹೆಳವರ ಕುರಿತು ಹೀಗೆ ವಿಶ್ಲೇಷಿಸುತ್ತಾರೆ ಸೂಕ್ಷ್ಮವಾಗಿ ಗಮನಿಸಿದಾಗಹೆಳವರು ಹೆಳವರು ಹೌದು ·ಹೇಳುವವರು ಹೌದು ಎಂದು ಹೇಳಬೇಕಾಗುತ್ತದೆ. ಇವರ ಮೂಲ ಪುರುಷ ಹೆಳವನಾಗಿದ್ದ ಕಾರಣ ಇವರು ಹೆಳವರು ಅವರು ತಮ್ಮ ಕುಲ ವೃತ್ತಾಂತವನ್ನು ಹೇಳುವವರಾದ್ದರಿಂದ ಹೆಳುವವರು ಕನ್ನಡದಲ್ಲಿ ಮಾನವ ಶಾಸ್ತ್ರಿಯ ವಿಧಾನದ ಮೂಲಕ ಹೆಳವರ ಕುರಿತು ನಡೆದ ಮೊದಲ ಶಾಸ್ತ್ರ ಭದ್ದ ಅಧ್ಯಯನವೆಂದರೆ ಹರಿಲಾಲ್ ಪವಾರ್ ಅವರ ಕರ್ನಾಟಕದ ಹೆಳವರು ಒಂದು ಜಾನಪದೀಯ ಅಧ್ಯಯನ ಎಂಬ ಮಹಾಪ್ರಬಂಧ ೧೯೯೦ರಲ್ಲಿ ಪವಾರ್ ಅವರು ಈ ಅಧ್ಯಯನವನ್ನು ಪೂರೈಸಿದ್ದಾರೆ ಸಾಹಿತ್ಯ ಅಕಾಡೆಮಿಯಿಂದ ೧೯೯೩ ರಲ್ಲಿ ಇದೇ ಲೇಖಕರ ಹೆಳವರ ಸಂಸ್ಕೃತಿ ಎಂಬ ಪುಸ್ತಕ ಪ್ರಕಟವಾಗಿದೆ. ಪ್ರಾಯಶಃಸದರಿ ಪುಸ್ತಕವು ಪವಾರರ ಈ ಪುಸ್ತಕದಲ್ಲಿ ಪವಾರ್ ಅವರು

ಕರ್ನಾಟಕದ ಜನಪದ ವೃಂದಗಳಲ್ಲಿ ಹೆಳವರದೂ ಒಂದು ವಿಶಿಷ್ಟ ಸಮೂಹ ಸ್ಥಿರ ವಸತಿ ಕಲ್ಪನೆಯ ಕೃಷಿಕ ಗುಂಪನ್ನು ಹೊಂದಿಕೊಂಡೆ ಜೀವನ ನಡೆಸುತ್ತಾ ಬಂದ ಮನೆತನಗಳ ವಂಶಾವಳಿಗಗಳನ್ನು ತಮ್ಮ ಮೌಖಿಕ ಪರಂಪರೆಯು ಮೂಲಕ ಕಾಲಾನಂತರ ಚಿಪ್ಪೋಡುಗಳಲ್ಲಿದಾಖಲೆಗೊಳಿಸಿ ಕಾಪಾಡಿಕೊಂಡು ಬಂದ ಹಿರಿಮೆ ಇವರದಾಗಿದೆ ಕುಲಕೊಂಡಾಡುವದನ್ನೆ ತಮ್ಮ
ಮುಖ್ಯವೃತ್ತಿಯನ್ನಾಗಿ ಸ್ವೀಕರಿಸಿದ ಹೆಳವರು ತಮ್ಮ ಉಪಜೀವನಕ್ಕೆ ಈ ವೃತ್ತಿಯನ್ನು ಹೆಚ್ಚಾಗಿ ಅವಲಂಬಿಸಿದ್ದು ಕಂಡು ಬುತ್ತದೆ'.೧೦

'ಆರ್ ಇ ಎಂಥೋವನ್ ಅವರು ದಿ ಟ್ರೈಬ್ಸ್ ಲ್ಯಾಂಡ್ಸ್ ಕ್ಯಾಸ್ಟ್ಸ ಆಪ್ ಬಾಂಬೆ ಗೆಜೆಟಿಯರದಲ್ಲಿ ಹೀಗೆ ಹೇಳಿದ್ದಾರೆ ಹೆಳವನು ವಾಸ್ತವಾಗಿ ಕುಂಟನಿದ್ದ ಈ ಜಾತಿಯು ಧರ್ಮ ನಿಷ್ಠೆಯಿಂದ ಸ್ಥಾಪನೆಗೊಂಡಿತು ಬೆಳಗಾವಿ ಬಿಜಾಪುರ ಧಾರವಾಡ ಕೆನರಾ ಜಿಲ್ಲೆಗಳಲ್ಲಿ ಬಿಕ್ಷೆ ಎತ್ತುತ್ತಾರೆ ಕೆಲವು ಪಂಗುಲರನ್ನು ಹೋಲುತ್ತಾರೆಆದರೆ ಇವರು ಲಿಂಗಾಯತರಾಗಿದ್ದು ಅದರಿಂದ ಬೇರ್ಪಡುತ್ತಾರೆ ಹೆಳವರು ತಾವು ನಿಜಾಮರ ಪ್ರಾಂತ್ಯದಲ್ಲಿದ್ದ ಕಲ್ಯಾಣವೆಂಬ ಪಟ್ಟಣದಿಂದ ಬಂದವರೆಂದು ಹೇಳುತ್ತಾರೆ ಮೂಲ ಅಥವಾ ಉಗಮದ ಬಗ್ಗೆ ಹೇಳುವುದಾದರೆ ೧೨ ನೇ ಶತಮಾನದಲ್ಲಿ ಲಿಂಗಾಯತ ಧರ್ಮವೂ ಅತ್ಯಂತ ಕಳಪೆ ಸ್ಥಿತಿಯಲ್ಲಿದ್ದಾಗ ಜೈನ ಧರ್ಮವು ಸಾಧನೆಯ ಹಾದಿಯಲ್ಲಿತ್ತು ಶಿವನು ತನ್ನ ಅನುಯಾಯಿಗಳನ್ನು ಕರೆದು ಭೂಮಿಗೆ ಹೋಗಿ ಲಿಂಗಾಯತ ಧರ್ಮವನ್ನು ಪುನುರುಸ್ಥಾನ ಮಾಡಬೇಕೆಂದು ಆಜ್ಞಾಪಿಸುತ್ತಾನೆ.ಹೆಳವರು ಶಿವ ಸೇವಕನಾಗಿ ಭೂಮಿಗೆ ಬಂದವರೆಂದು ತಾವು ಒಕ್ಕಾಲ ಭೃಂಗಿಯವರೆಂದೂ(ಒಂದು ಕಾಲಿನ ಭೃಂಗಿ) ಹೇಳುತ್ತಾರೆ ಭೂಲೋಕಕ್ಕೆ ಬಂದ ಮೇಲೆ ಮಿಶ್ರ ಬಣ್ಣದ ಬಟ್ಟೆಗಳನ್ನು ಧರಿಸಿ ಎತ್ತಿನ ಮೇಲೆ ಕುಳಿತು ಒಕ್ಕಲು ಮನೆಗಳ ಮುಂದೆ ಶಿವನ ಗುಣಗಾನ ಇತ್ಯಾದಿ ವಿಷಯಗಳನ್ನು ಹೊಗಳುತ್ತಾ ಹೋಗುತ್ತಿದ್ದರು ಎಂದು ತಿಳಿದು ಬರುತ್ತದೆ. ಮೂಲ ಪುರುಷನ ವೃತ್ತಿಯನ್ನು ಅನುಸರಿಸಿ ಕುಳಿತುಕೊಂಡು ಒಂದು ಕಾಲು ಕಂಬಳಿಯಲ್ಲಿ ಮರೆ ಮಾಡಿರುತ್ತಾರೆ'.೧೨

ಜನ್ನ ಕವಿಯ ಅನಂತಪುರಾಣಂ ಕ್ರಿಶ ೧೨೩೦ ದಲ್ಲಿ ಹೆಳವರನ್ನು ಕುರಿತು ಉಲ್ಲೇಖ ಬರುತ್ತದೆ 'ವ॥ ಅದಲ್ಲದೆಯಂ ತಿಮಿತ್ತಿಳಿಕಮೆಂಬುದು ಪಸೂಗೂಸಿರೆಗೆ ಮಸಿಯೆಂಬುದು 'ಹುರಿಯೋಂಡಿಗೆ ಪಣೆಕಟ್ಟೆಂಬುದು ಪೆಳವರಳ್ತಿಂಗೆ ಬೆಳ್ವೆಯೆಂಬುದು ಪಾರ್ವಂಗೆ' ಎಂಬ ವಾಕ್ಯ ಬರುತ್ತೆದೆ ಇದು ಪರಿಸಂಖ್ಯಾಲಂಕಾರ ಇಲ್ಲಿ ಹಣೆಕಟ್ಟು ಎಂಬ ಪದ ಹೆಳವರ ಎತ್ತಿನ ಹೆಣೆಗೆ ಕಟ್ಟುವ ಅಲಂಕಾರ ಎನ್ನುವುದು ಸ್ಪಷ್ಟ.

ಇಲ್ಲಿ ಹೆಳವರು ಮತ್ತು ಅವರ ಎತ್ತಿನ ಹಣೆಗೆ ಕಟ್ಟುವ ಅಲಂಕರದ ವಿಷಯಗಳು ಸೂಚಿತವಾಗಿದೆ ಜನ್ನನಗಿಂತ ಪೂರ್ವದಲ್ಲಿಯೇ ನಮ್ಮ ನಾಡಿನಲ್ಲಿ ಹೆಳವರ ಪರಂಪರೆ ಇದ್ದದು ಸ್ಪಷ್ಟ.

ಹೆಳವರ ಕುರಿತು ಇ ಥರ್ಸ್ಟನ್ ಅವರು ದಿ ಕ್ಯಾಸ್ಟ ಲ್ಯಾಂಡ್ ಟ್ರೈಬ್ಸ್ ಆಪ್ ಸದರ್ನ ಇಂಡಿಯಾ ಗೆ ಗೆಜೆಟಿಯರಿನಲ್ಲಿ ಹೀಗೆ ಹೆಳಿದ್ದಾರೆ

"ಹೆಳವ ಅಂದರೆ ಕುಂಟ ವ್ಯಕ್ತಿ ಎಂದರ್ಥ ಈ ಹೆಸರು ಒಂದು ಬಿಕ್ಷುಕ ವರ್ಗಕ್ಕೆ

ಅನ್ವಯಿಸುತ್ತದೆ.ಬಳ್ಳಾರಿ ಮೈಸೂರು ಮತ್ತು ಇತರ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ.ಹಳ್ಳಿಗಳ ಇತಿಹಾಸವನ್ನು ಸಂರಕ್ಷಿಸಿಕೊಂಡು ಬಂದ ಇವರುಗಳು ಒಕ್ಕಲು ಊರುಗಳಿಂದ ಹೋಗುವಾಗ ಎತ್ತಿನ ಮೇಲೆ ಕುಳಿತುಕೊಂಡು ಒಂದು ಕಾಲು ಕಂಬಳಿಯಲ್ಲಿ ಮರೆ ಮಾಡಿರುತ್ತಾರೆ ಇವರು ಬೇರೆ ಬೇರೆ ಒಕ್ಕಲು ಮನೆಗಳ ಮುಂದೆ ಒಂದು ಆಯಾ ಮನೆತನಕ್ಕೆ ಸಂಬಂಧಪಟ್ಟ ಇತಿಹಾಸ ಯುದ್ದದಲ್ಲಿ ಮಡಿದವನು ಗುಣಗಾನ ಇತ್ಯಾದಿಗಳನ್ನು ಹೇಳುತ್ತಾರೆ.

ಮೇಲಿನ ಎಲ್ಲ ಉಲ್ಲೇಖಗಳಿಂದ ಬಹುತೇಕ ನಾವು ಎರಡು ತೀರ್ಮಾನಗಳಿಂದ ಬರುತ್ತವೆ.

೧) ಹೆಳವರ ಮೂಲ ಪುರುಷನು ಹೆಳವನಾಗಿದು (ಕಾಲಿಲ್ಲದವನು) ಅವನು ಬಿಕ್ಷೆ ಬೇಡುತ್ತಾ ಬದುಕಿನನಾದ್ದರಿಂದ ಅವನ ಸಂತತಿಯ ಮುಂದೆ ಹೆಳವ ಸಮುದಾಯವಾಗಿ ರೂಪಗೊಂಡಿತು.

೨) ಹೆಳವರು ವಂಶಾವಳಿ ಶಾಸ್ತ್ರಜ್ಞರು ಅವರು ತಮ್ಮ ಒಕ್ಕಲುಗಳ ವಂಶಾವಳಿಯನ್ನು ಹೇಳುವವರು ಈ ಹೇಳುವ 'ವೃತ್ತಿಯಿಂದಾಗಿಯೇ ಇವರಿಗೆ ಹೆಳವ ಎಂಬ ಹೆಸರು ಬಂದಿರಬೇಕು ಎಂಬ ತೀರ್ಮಾನಕ್ಕೆ ಬರುತ್ತಾರೆ.

ವಂಶಾವಳಿಯನ್ನು ಹೇಳುವದರಿಂದ ಇವರಿಗೆ 'ಹೆಳವ' ಎಂಬ ಹೆಸರು ಬಂದಿರಬಹುದೇ ಎಂಬ ಊಹೆಯನ್ನು ಇಟ್ಟುಕೊಂಡು ಈ ಅಧ್ಯಯನ ಸಲುವಾಗಿ ಊರೂರು ಅಲೆಯುತ್ತಾ ಹೆಳವ ಸಮುದಾಯದ ಹಿರಿಯರ ಜೊತೆ ಚರ್ಚಿಸಲಾಯಿತು ಆದರೆ ಯಾರು ವಂಶಾವಳಿ ಹೆಳವ ಕಾರಣಕ್ಕಾಗಿ ಹೆಳವ ಹೆಸರು ಬಂದಿತು ಎಂಬ ಅಭಿಪ್ರಾಯವನ್ನು ಪುಷ್ಟಿಕರಿಸಬಲ್ಲ ಈ ಅಧ್ಯಯನಕ್ಕೆ ಹೆಳವರ ಹೆಸರನ್ನು ವಿಶ್ಲೇಷಿಸುವ ಉದ್ದೇಶವಿಲ್ಲದಿರುವದು ಸಹ ಕುತೂಹಲಕ್ಕೆ ಈ ಕುರಿತು ಚರ್ಚಿಸಲಾಯಿತು ಹೆಳವ ಸಮುದಾಯದ ಹಿರಿಯರು ತಮ್ಮ ಮೂಲ ಪುರುಷನ ಹುಟ್ಟಿನ ಕುರಿತು ಹೇಳುತ್ತಿದ್ದ ಸೃಷ್ಠಿ ಪುರಾಣಗಳು ಈಗಾಗಲೇ ವಿವಿದ ವಿದ್ವಾಂಸರಿಂದ ಸಂಗ್ರಹವಾಗಿರುವುದರಿಂದ ಅವುಗಳನ್ನು ಅಧ್ಯಯನದಲ್ಲಿ ಬಳಸಲಾಗಿದೆ.ಈ ಸೃಷ್ಠಿ ಪುರಾಣಗಳು ಹೆಳವ ಸಮುದಾಯದ ಹುಟ್ಟಿನ ಮೇಲೆ ಬೆಳಕು ಚೆಲ್ಲುತ್ತವೆ'.

### ೩) ಹೆಳವ ಸಮುದಾಯ ಕುರಿತು ಇರುವ ಪುರಾಣಗಳು

ಬಹುತೇಕ ಕೆಳಜಾತಿ ಮತ್ತು ದುಡಿಯುವ ವರ್ಗಗಳ ಇತಿಹಾಸ ಅವುಗಳ ಮೌಖಿಕ ಸಾಹಿತ್ಯದಲ್ಲಿ ಹುದುಗಿರುತ್ತದೆ.ಈ ದೇಶದ ಅಭಿಜಾತ ಆಕರ ಸಾಮಾಗ್ರಿಗಳಲ್ಲಿ ಈ ಸಮುದಾಯಗಳ ಚಿತ್ರಣ ಅತ್ಯಂತ ಅಸ್ಪೃಷ್ಟವಾದ್ದದ್ದು. ಜೊತೆಗೆ ಈ ಅಭಿಕಜಾತ ಆಕರಗಳು ಕಟ್ಟಿಕೊಡುವ ಇತಿಹಾಸವೂ ಸಹ ಅರ್ಧ ಸತ್ಯದಾಗಿರುತ್ತದೆ ಈ ಕಾರಣದಿಂದಾಗಿಯೇ ಆಯಾ ಸಮುದಾಯದ ಮೌಖಿಕ ಆಕರಗಳನ್ನು ಪ್ರಮಾಣ ಬದ್ದ ಆಕರಗಳೆಂದೇವಿದ್ವಾಂಸರು ಪರಿಗನಿಸಬೇಕು ಭರತದ ಶೋಷಿತ ಸಮುದಾಯಗಳ ಇತಿಹಾಸವೂ ಆಯಾ ಸಮುದಾಯಗಳು ಕಟ್ಟಿಕೊಂಡು ಬಂದ ಪುರಾಣಗಳಲ್ಲಿ ಮತ್ತು ಕಥೆಗಳಲ್ಲಿ ಅಡಕವಾಗಿರುತ್ತವೆ.ಈ ಹೆಳವ ಸಮುದಾಯ ಕುರಿತು ಇರುವ ಪುರಾಣಗಳನ್ನು

ಈ ಸಮುದಾಯದ ಚರಿತ್ರಯನ್ನು ಕಟ್ಟಿಕೊಡುವಾಗ ಮುಖ್ಯವಾಗಿ ಗಮನಿಸಬೇಕಾಗುತ್ತದೆ.

**ಪುರಾಣ – ೧**

"ಒಕ್ಕಲಿಗ ವ್ಯಕ್ತಿಯೊಬ್ಬನಿಗೆ ಏಳು ಜನ ಮಕ್ಕಳಿದ್ದರು ಅದರಲ್ಲಿ ಕಿರಿಯವನು ಹುಟ್ಟುತ್ತಲೇ ಕುಂಟನಾಗಿ ತನ್ನ ಕಿರಿಯ ಮಗನನ್ನು ಅದರಲ್ಲಿ ಕುಂಟನಾಗಿದ್ದ ಕಾರಣಕ್ಕಾಗಿಯೇ ಏನೋ ಅವನ ತಾಯಿ ಆತನನ್ನು ತುಂಬಾ ಪ್ರೀತಿಸುತ್ತಿದ್ದಳು.ಇದನ್ನು ಕಂಡು ಉಳಿದ ಆರು ಜನ ಅಣ್ಣಂದಿರು ತಾವು ದುಡಿಯುತ್ತಿರುವುದನ್ನು ನೋಡಿಯಾ ಏನು ದುಡಿಯದ ಕುಂಟನನ್ನು ಪ್ರೀತಿಸುವ ತಾಯಿಯ ಪಕ್ಷಪಾತವನ್ನು ಆಕ್ಷೇಪಿಸುತ್ತಿದ್ದರು. ಅಲ್ಲದೇ ತಮ್ಮ ಕಿರಿಯ ಸಹೋದರನನ್ನು ಈ ಕಾರಣಕ್ಕಾಗಿಯೇ ದ್ವೇಷಿಸುತ್ತಿದ್ದರು ಜೊತೆಗೆ ತಮ್ಮ ಅಂಗವಿಕಲ ಸಹೋದರನನ್ನು ಕೊಲ್ಲಲು ಪ್ರಯತ್ನಿಸಿದರು ಹಾಗೆ ಹಾಗೆ ಅವರು ಕೊಲ್ಲುವ ಪ್ರಯತ್ನ ಮಾಡಿದಾಗೆಲ್ಲ ಕುಂಟ ಸಹೋದರನನ್ನು ಅವರ ಮನೆಯ ಹೋರಿಯೊಂದು ಸದಾ ರಕ್ಷಿಸುತ್ತಿತ್ತು. ತಮ್ಮ ಪ್ರಯತ್ನಗಳೆಲ್ಲಾ ವಿಫಲವಾದಾಗ ಅವರು ತಮ್ಮ ಆಸ್ತಿ ಹಂಚಿಕೆ ಮಾಡಿಕೊಂಡು ಕುಂಟ ತಮ್ಮನನ್ನು ಒಂಟಿಯಾಗಿಸಲು ಮುಂದಾದರು.ಕುಂಟ ವ್ಯಕ್ತಿ ಆಸ್ತಿಯನ್ನು ತೆಗೆದುಕೊಂಡು ದುಡಿದು ಬದುಕಲು ಸಾಧ್ಯವೇ ಎಂದು ಯೋಚಿಸಿದ ಶಿವನು ಅಣ್ಣ ತಮ್ಮಂದಿರ ಮಧ್ಯ ರಾಜಿ ಸೂತ್ರವೊಂದನ್ನು ಏರ್ಪಡಿಸಿದನು ಪಿತ್ರಾರ್ಜಿತವಾಗಿ ಬಂದ ಆಸ್ತಿಯನ್ನು ಆರು ಜನರು ಅಣ್ಣ ತಮ್ಮಂದಿರು  ಹಂಚಿಕೊಳ್ಳಬೇಕು ಆದರೆ ಅಂಗವಿಕಲ ತಮ್ಮ ತನ್ನ ಅಣ್ಣಂದಿರ ಮನೆಗೆ ಎತ್ತಿನ ಮೇಲೆ ಹೋಗಿ ಗಂಟೆ ಬಾರಿಸಿ ಅವರಿಂದ ತನ್ನ ಪಾಲು ಪಡೆದು ಬದುಕಬೇಕು ಎಂದು ಶಿವನು ತೀರ್ಪು ನೀಡಿದನು.ಅಣ್ಣಂದಿರು ಅವನಿಗೆ ಬೇಕಾದ ದಾನ ನೀಡುತ್ತಾ ಬಂದರು.ಕುಂಟ (ಹೆಳವ) ವ್ಯಕ್ತಿ ಎತ್ತಿನ ಮೇಲೆ ಏರಿ ಗಂಟೆ ಬಾರಿಸುತ್ತಾ ಅಣ್ಣಂದಿರ ಮನೆಗೆ ಹೋಗಿ ತನ್ನ ಪಾಲನ್ನು ಪಡೆಯುವುದು ಮುಂದುವರೆದುಕೊಂಡು ಬಂದಿತು. ಮುಂದೆ ಈತನ ತಲೆಮಾರಿನ ಎಲ್ಲರೂ ಇದೇ ವೃತ್ತಿಯನ್ನು ಅನುಸರಿಸಿಕೊಂಡು ಬಂದರು.ಈ ಕುಂಟ(ಹೆಳವ)ನ ಸಂತತಿಯ ಮುಂದೆ ಹೆಳವರೆಂದು ಕರೆಯಲ್ಪಟ್ಟರು.ಇವರು ತಮ್ಮ ಒಕ್ಕಲಿಗರ ಮನೆಗೆ ಹೋಗಿ ಅವರ ಕುಲಗೋತ್ರಗಳ ಇತಿಹಾಸವನ್ನು ಹೇಳುತ್ತಾ ಬೀಕ್ಷೆ ಬೇಡುತ್ತಾ ಜೀವಿಸಲಾರಂಬಿಸಿದರು.

**ಪುರಾಣ – ೨**

ಹೆಳವರು ತಮ್ಮ ನಿಜಾಮನ ಆಳ್ವಿಕೆಗೊಳಪಟ್ಟಿದ್ದೆ ಕಲ್ಯಾಣದಿಂದ ಬಂದಂವರೆಂದು ಹೇಳುತ್ತಾರೆ.ಹನ್ನೆರಡನೆ ಶತಮಾನದ ಹೊತ್ತಿಗೆ ಶೈವಧರ್ಮವು ಅವನತಿಯ ಕಡೆಗೆ ಸಾಗುತ್ತಿತ್ತು.ಆಗ ಜೈನ ಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿತ್ತು ಅದನ್ನು ನೋಡಿದ ಶಿವನು ತನ್ನ ಪ್ರಮಥರನ್ನು ಕರೆದು ಭೂಮಿಗೆ ಹೋಗಿ ಲಿಂಗಾಯತ ಧರ್ಮವನ್ನು ಉಳಿಸಿ ಎಂದು ಆಜ್ಞಾಪಿಸುತ್ತಾನೆ.ಹೀಗೆ ಶಿವನ ಆಜ್ಞೆಯಂತೆ ಭೂಮಿಗೆ ಬಂದ ಪ್ರಥಮರಲ್ಲಿ ಒಕ್ಕಾಲು ಭೃಂಗಿಯು (ಒಂಟಿ ಕಾಲಿನ ಭೃಂಗಿ) ಒಬ್ಬನು ಹೆಳವರರು ತಮ್ಮನ್ನು ಈ ಒಕ್ಕಾಲು ಭೃಂಗಿಯು ವಂಶಸ್ಥರು ಎಂದು

ಹೇಳಿಕೊಳ್ಳುತ್ತಾರೆ.ಭೂಮಿಗೆ ಬಂದ ಪ್ರಥಮರೆಲ್ಲ ಮಾಸಲು ಕಂದು ಬಣ್ಣದ ಉಡಪನ್ನು ಧರಿಸಿದ್ದರು. ಕುಳಿತುಕೊಂಡು ಜೊತೆಗೆ ಎತ್ತುಗಳ ಮೇಲೆ ಕುಳಿತುಕೊಂಡು ಮನೆ ಮನೆಗೆ ಹೋಗಿ ಗುಣಗಾನ ಮಾಡಲಾರಂಭಿಸಿದರು ಹೆಳವರು ತಮ್ಮನ್ನು ಒಕ್ಕಾಲ ಭೃಂಗಿಯ ವಂಶಸ್ಥರೆಂದು ಹೇಳಿಕೊಳ್ಳುತ್ತಾ ಎತ್ತುಗಳ ಮೇಲೆ ಹತ್ತಿಕೊಂಡು ಇಕ್ಕಲು ಮನೆಗಳಿಗೆ ಹೊಗಿ ಶಿವನ ಕಥಗಳನ್ನು ಹೇಳಿ ಭಿಕ್ಷೇ ಬೇಡುವವನ್ನು ವೃತ್ತಿಯನ್ನಾಗಿಸಿಕೊಂಡರು ಒಕ್ಕಾಲು ಭೃಂಗಿ ತಮ್ಮ ಮೂಲ ಪುರುಷನಾಗಿದ್ದ ರಿಂದಾಗಿ ಈವತ್ತಿ ಹೆಳವರೂ ಸಹ ಕಾಲನ್ನು ಬಟ್ಟೆಯಿಂದ ಮರೆ ಮಾಡಿಕೊಳ್ಳುತ್ತಾರೆ.

ಪುರಾಣ – ೩

ದೇವಲೋಕದಲ್ಲಿ ವಿಷ್ಣು ಲಕ್ಷ್ಮೀ ಬ್ರಹ್ಮ ಸರಸ್ವತಿ ಮತ್ತು ಶಿವ ಪಾರ್ವತಿಯರ ವಿವಾಹ ಏರ್ಪಟ್ಟಿತು ಇವರ ವಿವಾಹ ನಡೆಯುವ ಸಂದರ್ಭದಲ್ಲಿ ವಧು ವರರ ಗೋತ್ರಗಳನ್ನು ಹೇಳುವ ವ್ಯಕ್ತಿಯೊಬ್ಬನ ಅವಶ್ಯಕತೆ ಉಂಟಾಯಿತು.ಆಗ ಮಣ್ಣಿನಿಂದ ಬೊಂಬೆಯೊಂದನ್ನು ಮಾಡಿ ಅದಕ್ಕೆ ಜೀವ ತುಂಬಲಾಯಿತು.ಈ ಬೊಂಬೆಯ ಒಂದು ಕಾಲು ಕುಂಟಾಗಿತ್ತು.ತ್ರೀಮೂತಿಗಳಿಂದ ಜೀವ ಪಡೆದ ಈ ವ್ಯಕ್ತಿಯು ನಮ ವಧು ವರರ ಗೋತ್ರಗಳನ್ನು ಹೇಳಿದನು ತ್ರೀಮೂರ್ತಿಗಳು ಈ ಕುಂಟ ವ್ಯಕ್ತಿಯನ್ನುಗೋತ್ರ ಹೇಳುವ ಈ ವೃತ್ತಿಯನ್ನೇ ಅವಲಂಬಿಸಿ ಬದುಕು ಎಂದು ಆಶಿರ್ವದಿಸಿದರು ಈ ಕುಂಟ ವ್ಯಕ್ತಿಯ ವಂಶದವರೇ ಈ ಪಿಚ್ಚಗುಂಟಲು ಸಮುದಾಯವಾಗಿದೆ. ಇವರೇ ಮುಂದೆ ಗೋತ್ರ ಹೇಳುವ ವಂಶಾವಳಿಶಾಸ್ತ್ರಜ್ಞರಾಗಿ ರೂಪಗೊಂಡರು ಇವರು ಕಾಪ್ಯ ಮತ್ತು ಗೊಲ್ಲ ಸಮುದಾಯದ ಮನೆಗಳಿಗೆ ಹೋಗಿ ಗೋತ್ರ ಹೇಳುತ್ತಾ ಬೀಕ್ಷೆ ಬೇಡಿ ಬದುಕುತ್ತಿದ್ದಾರೆ.

ಪುರಾಣ – ೪

ಏಳು ಜನ ಗೊಲ್ಲ ಮಹಿಳೆಯರಿಗೆ ಮಕ್ಕಳಿರಲಿಲ್ಲ ಇವರು ತಮಗೆ ಸಂತಾನ ಕರುಣಿಸುವಂತೆ ಶಿವನನ್ನು ಬೇಡಿದರು ಶಿವ ಅವರಿಗೆ ಒಬ್ಬ ಕುಂಟ ಬಾಲಕನನ್ನು ಕೊಟ್ಟನು.ಅಲ್ಲದೆ ಶಿವನ ವರದಿಂದಾಗಿ ಈ ಏಳು ಜನ ಮಹಿಳೆಯರು ಗರ್ಭಿಣಿಯರಾದರು. ಅಲ್ಲದೇ ಏಳು ಜನ ಹೆಣ್ಣು ಕೂಸುಗಳಿಗೆ ಜನ್ಮ ನೀಡಿದರು ದೇವರ ಅಣತಿಯಂತೆ ತನ್ನ ಏಳು ಜನ ಹೆಣ್ಣು ಮಕ್ಕಳನ್ನು ಕುಂಟ ಬಾಲಕನಿಗೆ ಕೊಟ್ಟು ಮದುವೆ ಮಾಡಿದರು ಅನಂತರ ಈ ಕುಂಟ ವ್ಯಕ್ತಿಯು ಶಂಖ ಗಂಟೆ ಒಂದು ಏತ್ತು ಮತ್ತು ಗಜ ಶೂಲವನ್ನು ಪಡೆದುಕೊಂಡು ಅಲೆಮಾರಿಯಾಗಿ ಬಿಕ್ಷೇ ಬೇಡುತ್ತಾ ಬದುಕಲಾರಂಬಿಸಿದರು ಎತ್ತಿನ ಮೇಲೆ ಹತ್ತಿಕೊಂಡು ಊರೂರು ಸುತ್ತ ತೊಡಗಿದ ಪಿಚ್ಚಗುಂಟ್ಲ ಸಮುದಾಯದವರು ಈತನನ್ನು ತಮ್ಮ ಮೂಲ ಎಂದು ಹೇಳಿಕೊಳ್ಳುತ್ತಾರೆ.

ಪುರಾಣ – ೫

ಶಿವನ ಒಡ್ಡೋಲಗದಲ್ಲಿ ವಿರಾಜಿಸುವ ಶಿವಗಣದಲ್ಲಿ ಶೃಂಗಿ ಹಾಗೂ ಒಕ್ಕಾಲು ಭೃಂಗಿ ಪ್ರಮೂಖರು ಶೃಂಗಿ ಶಿವಪಾರ್ವತಿಯರನ್ನು ಸಮಾನವಾಗಿ ಗೌರವಿಸುತ್ತಿದ್ದ ಭಕ್ತಿಯಿಂದ ಇಬ್ಬರಿಗೂ ಕೈ ಮುಗಿಯುತ್ತಿದ್ದ ಒಕ್ಕಾಲ ಭೃಂಗಿಯು ಸ್ವಭಾವ ವಿಚಿತ್ರವಾಗಿತ್ತು. ಅವನು ತನ್ನ ಒಲವೆನ್ನೆಲ್ಲ

ಶಿವನಿಗೆ ಮಾತ್ರ ಮೀಸಲಾಗಿಟ್ಟದ್ದ ಪಾರ್ವತಿಗೆ ನಮಸ್ಕಾರವನ್ನು ಮಾಡುತ್ತಿರಲಿಲ್ಲ ಈ ಸೋಜಿಗದ ಸಂಗತಿಯನ್ನರಿತ ನಾರದ ಭೃಂಗಿಯ ಸಭಕ್ತಿಯ ರೀತಿಯನ್ನು ಒಮ್ಮೆ ಪಾರ್ವತಿಗೆ ತಿಳಿಸಿದ ಸ್ವಾಭಿಮಾನಿಯಾದ ಪಾರ್ವತಿ ಇದನ್ನು ಸೂಕ್ಷ್ಮವಾಗಿ ಗಮನಿಸಿ ಭೃಂಗಿಯನ್ನುದ್ದೇಶಿಸಿ ನಿನ್ನ ದೇಹದಲ್ಲಿ ಪ್ರವಹಿಸುವ ಶಕ್ತಿಯ ಸಂಚಯವೆಲ್ಲ ನನ್ನದಾಗಿದ್ದರೂ ನನಗೇಕೆ ನಮಸ್ಕರಿಸುವುದಿಲ್ಲ ಗೌರವಿಸುವುದಿಲ್ಲ ಎಂದು ಪ್ರಶ್ನಿಸಿದಳು ನಿರ್ವಿಕಾರ ಮನಸ್ಸಿನಿಂದ ಭೃಂಗಿ ದೇವಿ ಶಿವನೇ ನನ್ನ ಪರಮ ದೈವ ಅವನೋಬ್ಬನೇ ಸರ್ವ ಶಕ್ತಿ ಸಂರಕ್ಷಕ ಆದ್ದರಿಂದ ನನ್ನ ಭಕ್ತಿ ಅವನೊಬ್ಬನನಿಗೆ ಮೀಸಲಾಗಿದೆ ಎಂದು ಉತ್ತರಿಸಿದ ಅವನ ಮಾರುತ್ತರ ಕೇಲಿ ಪಾರ್ವತಿ ಕೆರಳಿ ಕೆಂಡವಾದಳು.ಅವನ ದೇಹದಲ್ಲಿರುವ ತನ್ನ ಶಕ್ತಿಯನ್ನೆಲ್ಲಾ ಸೆಳೆದುಕೊಂಡಳು ಭೃಂಗಿ ನಿಶ್ಚೇಷ್ಟಿತ ಮೌಂಸದ ಮುದ್ದೆಯಾಗಿ ಬಿದ್ದ ತನ್ನ ಪರಮ ಭಕ್ತನಿಗೊದಗಿದ ದುರಂತವನ್ನು ಕಂಡು ಪರಮಾತ್ಮನ ಹೃದಯ ಕರಗಿತು ಕರುಣೆಯಿಂದ ಭೃಂಗಿಗೆ ತನ್ನ ಶಕ್ತಿಯನ್ನು ದಾರೆಯೆರದ ಅದರಿಂದ ಭೃಂಗಿ ಸ್ವಲ್ಪ ಚೇತರಿಸಿಕೊಂಡ ನಾದರು ಸರಿಯಾಗಿ ಚಲಿಸುವ ಶಕ್ತಿ ಇರಲಿಲ್ಲ ಬೇರಾವ ಕೆಲಸ ನಿರ್ವಹಿಸಲು ಅವನು ಅಸಮರ್ತನಾದ ಅದರಿಂದ ಅನುಕಂಪಗೊಂಡ ಪರಮಾತ್ಮ ಅವನಿಗೆ ನಂದಿವಾಹನ ಕೊಟ್ಟ ಅದರ ಮೇಲೆ ಕುಳಿತು ಭಕ್ತರ ವಂಶಾವಳಿಯನ್ನು ಹೇಳಿ ಜೀವಿಸಲೆಂದು ಆಶೀರ್ವಾದಿಸಿದ ಒಕ್ಕಾಲ ಭೃಂಗಿಯ ವಂಶಜರೇ ಮುಂದೆ ಹೆಳವರಾದರು.

ಪುರಾಣ – ೬

ಶಿವನ ಆಸ್ಥಾನದಲ್ಲಿರುವ ೬೩ ಪುರಾತನದಲ್ಲಿ ಒಕ್ಕಾಲ ಭೃಂಗಿಯು ಒಬ್ಬ ಅವನಿಗೆ ಬಲಗಾಲು ಅವನ ಹೆಂಡತಿಗೆ ಎಡಗಾಲು ಇದ್ದಿರಲಿಲ್ಲ ಆದರೂ ಅವನು ಭಕ್ತಿಯಿಂದ ನರ್ತನ ಮಾಡಿ ಶಿವನಿಗೆ ಬಲಗೈಯಿಂದ ಪಾರ್ವತಿಗೆ ಏಡಗೈಯಿಂದ ನಮಸ್ಕರಿಸುತ್ತಿದ್ದ ಅವನು ನಮಸ್ಕರಿಸುವ ವಿಚಿತ್ರ ರೀತಿಯನ್ನು ಕಂಡು ಪಾರ್ವತಿ ಅವನನೊಮ್ಮೆ 'ಹೀಗೇಕೆ? ಎಂದು ವಿಚಾರಿಸದಳು ಅದಕ್ಕೆ ಭೃಣಗಿ ನಮ್ಮಪ್ಪನ ಏಡಕ್ಕೆ ಕುಳಿತು ಮದುವೆ ಆಗಿರುವುದರಿಂದ ನೀನು ಏಡಗೈಯಿಂದ ಏಡಕ್ಕೆ ನಮಸ್ಕರಿಸುವೇನು ಎಂದು ನುಡಿದ ಕುಪಿತಳಾದ ಪಾರ್ವತಿ ಅವನಲ್ಲಿರುವ ತನ್ನ ಶಕ್ತಿ ಸಂಚಯದ ರೋಮಗಳನ್ನು ಕೇಳಿದಳು ಅದರಿಂದ ಸ್ವಲ್ಪವೂ ದೃತಿಗೆಡದ ಅವನು ಹೆಬ್ಬಳರಿಂದ ಹಿಡಿದು ತನ್ನ ಇಡೀ ದೇಹದ ತ್ವಚವನ್ನು ಸುಲಿದು ಕೊಟ್ಟನು ಪರಮಾತ್ಮನಲ್ಲಿ ಪ್ರಾರ್ಥಿಸಿದರು ಪ್ರಸನ್ನನಾದ ಶಿವನು ಅವನನ್ನು ಮುನ್ನಿನಂತೆ ಮಾಡಿ ನಂದಿವಾಹನ ಕೊಟ್ಟನು ಅದರ ಮೇಲೆ ಕುಳಿತು ೬೩ ಪುರಾತನರ ವಂಶಾವಳಿ ಹೊಗಳುತ್ತಾ ಜೀವಿಸಲೆಂದು ಆಶೀರ್ವದಿಸದ ಆ ಒಕ್ಕಾಲ ಭೃಂಗಿಯ ವಂಶಜರೇ ಹೆಳವರಾದರು.

ಪುರಾಣ – ೭

ನಾರದನಿಗೆ ಅರವತ್ತು ಮೂರು ಮಕ್ಕಳಂತೆ ಅವರಲ್ಲಿ ಒಬ್ಬ ಕುಂಟ ಹುಟ್ಟಿದನಂತೆ ನಾರದನು ಭಕ್ತಿಯಿಂದ ಶಿವನನ್ನು ಪ್ರಾರ್ಥಿಸಿ ಕುಂಟ ಮಗನಿಗೆ ಜೀವನೋಪಾಯವನ್ನು

ಕಲ್ಪಿಸಿಕೊಂಡು ಎಂದು ಕೇಳಿದನಂತೆ ಆಗ ಶಿವನು ನಂದಿಯನ್ನು ಕೊಟ್ಟು ಅದರ ಮೇಲೆ ಕುಳಿತು ಅರವತ್ತು ಮೂರು ಜನ ಪುರಾತನರ ವಂಶಾವಳಿಯನ್ನು ಹೇಳಿಕೊಂಡು ಜೀವಿಸು ಎಂದು ಹೇಳಿದವನಂತೆ ಅಂದಿನಿಂದ ಎತ್ತು ಅವರಿಗೆ ಬಳುವಳಿಯಾಗಿ ಬಂದು ಎತ್ತಿನ ಹೆಳವರು ಎಂದು ಹೆಸರಾಯಿತಂತೆ.

ಪುರಾಣ – ೮

ಒಂದಾನೊಂದು ಕಾಲದಲ್ಲಿ ಮೂವತ್ತಮೂರು ಕೋಟಿ ದೇವಾದಿ ದೇವತೆಗಳು ಶಿವನೊಡ್ಡಲಗದಲ್ಲಿ ಸಭೆ ಸೇರಿದರು ಆ ಸಭೆಯಲ್ಲಿ ಶೃಂಗಿ ಹಾಗೂ ಭೃಂಗಿ ಅಷ್ಟೇ ಪ್ರಮುಖರು ಶೃಂಗಿ ಶಿವಪಾರ್ವತಿಯವರನ್ನು ಸರಿಸಮವಾಗಿ ಭಕ್ತಿ ಗೌರವದಿಂದ ಕೈ ಮುಗಿಯುತ್ತಿದ್ದರು ಆದರೆ ಭೃಂಗಿಯು ಭಕ್ತಿಗೆ ಶಿವನೊಬ್ಬನಿಗೆ ಮೀಸಲು ಈ ಸೋಜಿಗದ ಸಂಗತಿಯನ್ನರಿತ ಪಾರ್ವತಿಯು ಭೃಂಗಿಯನ್ನುದ್ದೇಶಿಸಿ ನಮಸ್ಕಾರ ಮಾಡುವಿ ನನಗೇಕೆ ನಮಸ್ಕರಿಸುವುದಿಲ್ಲ? ಎಂದು ಕೇಳಿದಳು ಆಗ ತಾಯಿ ನನ್ನ ಪರಮದೈವ ಶಿವನೊಬ್ಬನೇ ನನ್ನ ಭಕ್ತಿ ಗೌರವ ಶಿವನೊಬ್ಬನಿಗೆ ಮೀಸಲಿಟ್ಟಿರುವೆ.ಎಂದನು ಈ ಮಾತುಗಳನ್ನು ಸಹಿಸದೇ ಕುಪಿತಳಾದ ಪಾರ್ವತಿ ಕ್ಷಣಾರ್ಧದಲ್ಲಿಯೇ ಭೃಂಗಿಗೆ ಕೈಕಾಲು ಊನವಾಗುವಂತೆ ಶಾಪವಿಧಿಸಿದಳು. ಮಾತ್ರವಲ್ಲ ಅವನ ದೇಹದಲ್ಲಿರುವ ರಕ್ತ ಮೌಂಸಗಳನ್ನು ದೃಷ್ಟಿ ಮಾತ್ರದಿಂದಲ್ಲೇ ಹೀರಿಕೊಂಡಳು ಕೊನೆಗೆ ಅಲ್ಲಿ ಉಳಿದಿದ್ದು ಭೃಂಗಿಯ
ಎಲುಬಿನ ಹಂದರ ಅದು ಕೂಡ ಕಣ್ಣ ಮುಂದೆ ಇರಬಾರದೆಂದು ಆಕಾಶ ಭೂಮಿಯ ಮಧ್ಯ ಹಾರಾಡುವಂತೆ ಮಾಡಿದಳು.

ಶಿವನಿಗೆ ಈ ಭೂಮಿಯ ಮಧ್ಯ ವಿಷಯ ನಾರದನಿಂದ ಗೊತ್ತಾದಾಗ ಪಾರ್ವತಿಯನ್ನು ಕರೆದು ಕೋಪದಿಂದ ಗದರಿಸಿದನು ಅವರಬ್ಬರ ನಡುವೆ ವಾಗ್ವಾದ ನಡೆಯಿತು ಭೃಂಗೇಶ್ವರ ನನ್ನ ಮಗ ಅವನ ಭಕ್ತಿ ಗೌರವಕ್ಕೆ ಮೆಚ್ಚಿರುವನು ಅವನಿಗೆ ಶಿಕ್ಷೆ ಆಗಬಾರದೆಂದು ಹೇಳಿ ತನ್ನ ಕೈಯಲ್ಲಿಯೆ ತ್ರಿಶೂಲ ಆಧಾರವಾಗಿಟ್ಟನು ಕ್ಷಣಾರ್ಧದಲ್ಲಿಯೇ ಭೃಂಗಿಯ ಎಲುಬಿನ ಹಂದರ ತ್ರಿಶೂಲ ಮೇಲೆ ಬಂದು ನಿಂತಿತು ಕೊನೆಗೆ ಪಾರ್ವತಿ ಸೋತೆನೆಂದು ಶಿವನಿಗೆ ಶರಣಾದಳು ಶಿವನ ಅಪ್ಪಣೆಯ ಮೇರೆಗೆ ಭೃಂಗೇಶ್ವರನಿಗೆ ವಿಧಿಸಿದ ಶಾಪವನ್ನು ಹಿಂತೆಗೆದುಕೊಂಡು ಮತ್ತೆ ರಕ್ತ ಮೌಂಸವನ್ನು ಧಾರೆ ಏರೆದಳು ಭೃಂಗೇಶ್ವರನಿಗೆ ಶಿವನ ನಂದಿ ಮತ್ತು ಲಿಂಗ ಮುದ್ರೆ ಕೊಟ್ಟು ಈ ಚಿರಾಯುವಾಗಿರಲಿ ಜಾತಿಮತ ಭೇದವನ್ನು ಅರಿಯಿತು ಕುಲಗೋತ್ರ ಆಗು ಹೋಗುಗಳನ್ನು ಹೋಗಳುತ್ತಾ ಅವರಿಂದ ಸಂಭಾವನೆಯಾಗಿ ಧವಸ ದಾನ್ಯಗಳನ್ನು ಪಡೆದು ಜೀವನ ಸಾಗಿಸು ಎಂದು ಆಶೀರ್ವದಿಸಿ ಮಾಯವಾದರು ಮುಂದೆ ಭೃಂಗೇಶ್ವರನಿಂದ ಹೆಳವ ಪರಂಪರೆ ಬೆಳೆಯಿತು.ಕಾರಣ ಬೃಂಗೇಶ್ವರ ಹೆಳವರ ಮೂಲಪುರುಷನೆಂದು ಐತಿಹ್ಯ.

ಪುರಾಣ – ೯

ಬಸವಣ್ಣವರ ಕಾಲದಲ್ಲಿ ಒಕ್ಕಲು ಗೌಡನಿಗೆ ಏಳು ಜನ ಗಂಡು ಮಕ್ಕಳಿದ್ದರು ಅವರಲ್ಲಿ

ಕಿರಿಯನ ಹುಟ್ಟಾ ಅಂಗಹೀನ ಇದ್ದ. ಆದ್ದರಿಂದ ಜನರು ಅವನನ್ನು ಹೆಳವ ಎಂದೇ ಕರೆಯುತ್ತಿದ್ದರು ಮಕ್ಕಳು ದೊಡ್ಡವರಾದ ಬಳಿಕ ಯೋಗ್ಯ ಕನ್ಯ ನೋಡಿ ಮದುವೆ ಮಾಡಿದರು ಆದರೆ ಹೆಳವನಿಗೆ ಯಾರು ಹೆಣ್ಣು ಕೊಡಲಿಲ್ಲ ಅವರೆಲ್ಲರೂ ದಿನನಿತ್ಯ ಪ್ರತಿಯೊಬ್ಬರ ಮನೆಗೆ ಬಂದು ಊಟ ಮಾಡಿ ಹೋಗು ಆಸ್ತಿಯಲ್ಲಿ ಪಾಲುತೆಗೆದುಕೊಂಡು ನೀನೇನ್ ಮಾಡ್ತಿ ಎಂದು ಹೇಳಿದರು ಹೆಳವನ ತಾಯಿ ಸದಾ ಅವನಿಗೆ ಬೆಂಗಾವಲಾಗಿ ಇದ್ದಳು ಕುಂಟ ಮಗ ಹೇಗೆ ಜೀವನ ಸಾಗಿಸುವುದು ಎಂದು ಚಿಂತೆ ಮಾಡುತ್ತಿದ್ದಳು.ಹೆಳವನು ಯಾರ ಹಂಗಿನಲ್ಲೂ ಇರಬಾರದೆಂದು ಯೋಚಿಸಿ ಬಡ ಬಗ್ಗರಿಗೆ ಅಣ್ಣದಾತನಾಗಿದ್ದ ಬಸವಣ್ಣನವರು ಬಳಿ ಕಲ್ಯಾಣಕ್ಕೆ ಬಂದನು ಅಲ್ಲಿ ಸಾವಿರಾರು ಜನ ದೀನ ದಲಿತರಿಗೆ ಮತ್ತು ಶರಣರಿಗೆ ಸ್ಥಳಾವಕಾಶವಿತ್ತು ಅವರ ಮಧ್ಯದಲ್ಲಿ ಹೆಳವ ಇರತೊಡಗಿದ.

ಬಸವಣ್ಣನವರು ಕಲ್ಯಾಣದಲ್ಲಿ ಅರವತ್ತ ಮೂರು ಜನ ಶಿವಶರಣರಿಗೆ ಒಂದೊಂದು ಕಾಯಕ ಒದಗಿಸಿಕೊಟ್ಟಿದ್ದರು ಆಗ ಹೆಳವನು ಬಸವಣ್ಣನವರ ಬಳಿ ಬಂದು ನನಗೆ ಯಾವುದಾದರೊಂದು ಕಾಯಕ ಕೊಡಬೇಕೆಂದು ಕೇಳಿಕೊಂಡರು ಆಗ ಬಸವಣ್ಣನವರು ಹೆಳವನಿಗೆ ಯಾವ ಕೆಲಸ ಹಚ್ಚಬೇಕು? ಇವನು ಕುಂಟ ಇವನಿಗೆ ಕೆಲಸ ಹಚ್ಚಿದರೆ ಹೇಗೆ ಮಾಡುವನು ಎಂದು ಯೋಚಿಸಿದರು ಕೊನೆಗೆ ಒಂದು ಉಪಾಯ ಮಾಡಿ ಹೆಳವನಿಗೆ ಕುಳಿತಕೊಳ್ಳಲಿಕೆ ನಂದಿಕೊಟ್ಟು

ಪ್ರತಿದಿನ ಬೆಳಗಾಗುವ ಪೂರ್ವದಲ್ಲಿಯೇ ಅರವತ್ತು ಮೂರು ಜನ ಪುರೋಹಿತರ ಮನೆಗಳಿಗೆ ಹೋಗಿ ಅವರ ಆಗು ಹೋಗುಗಳ ಬಗ್ಗೆ ವಿಚಾರಿಸಿಕೊಂಡು ಬರಬೇಕೆಂದು ಹೇಳಿದರಂತೆ ಹೆಳವನು ದಿನಾಲು ಅದೇ ವೃತ್ತಿ ಮಾಡತೊಡಗಿದ ಇದು ಒಂದು ವೃತ್ತಿಯಾಗಿಯೆ ಬೆಳೆಯಿತು ಮುಂದೆ ಪುರೋಹಿತರು ಯಾವ ಯಾವ ಊರುಗಳಿಗೆ ಹೋಗಿ ನೆಲೆಸಿದರೋ ಅಲ್ಲಿಯು ಹೋಗತೊಡಗಿದ ಇವನನ್ನು ಕಂಡು ಕಾಳು ಕಡಿಗಳನ್ನು ಕೊಡ ತೋಡಗಿದರು ಇದು ಒಂದು ವೃತ್ತಿಯಾಗಿ ಯೇ ಮುಂದುವರಿಯಿತು.ಕೆಲವು ದಿನಗಳಾದ ಬಳಿಕ ಹೆಳವನಿಗೆ ಮದುವೆಯಾಯಿತು ಅವನ ಹೊಟ್ಟೆಯಿಂದ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು ಹುಟ್ಟಿಕೊಂಡರು ಅವರು ಕೂಡ ಇದೆ ವೃತ್ತಿಯನ್ನು ಅವಲಂಬಿಸಿಕೊಂಡರು ಹೆಳವನ ಹೊಟ್ಟೆಯಿಂದ ಹುಟ್ಟಿದಕ್ಕೆ ಜನ ಹೆಳವನ ಮಕ್ಕಳು ಎಂದು ಕರೆಯತೊಡಗಿದರು.

## ಪುರಾಣ – ೧೦

ವಿಜಯ ನಗರ ಪಟ್ಟಣದಲ್ಲಿ ಭೂಮಿ ಪುತ್ರನಾಗಿ ಮುದ್ದು ರಾಜೇಗೌಡ ಹುಟ್ಟಿದ ಹನ್ನೇರಡು ವರ್ಷ ಅಲ್ಲಿ ಒಗೆತನ ಮಾಡಿಕೊಂಡಿರಬೇಕಾದರೆ ಸುಲ್ತಾನ್ ಮಹಮದ್ ವಿಜಯನಗರವನ್ನು ಆಕ್ರಮಿಸಿಕೊಂಡು ಒಕ್ಕಲು ಮಕ್ಕಳಿಗೆ ಕಿರುಕುಳ ಕೊಳತೊಡಗಿದ ರಾಜೇಗೌಡನಿಗೆ ಹದಿನೆಂಟು ಮಂದಿ ಗಂಡು ಮಕ್ಕಳು ಹದಿನೆಂಟು ಮಂದಿ ಹೆಣ್ಣುಮಕ್ಕಳು ತನ್ನಷ್ಟೇ ವೈಭವದಿಂದ

ಬಾಳುತ್ತಿದ್ದ ರಾಜೇಗೌಡನ ಅವನ ಮಕ್ಕಳ ಕಂಚಿನ ಕದನಗಳನ್ನು ಕೀಳಿಸಿ ಹಾಳೂಗೆಡವಬೇಕೆಂಬುದು ಸುಲ್ತಾನನ ಇಚ್ಚೆಯಾಯಿತು ಅವನ ಕಿರುಕುಳವನ್ನು ತಾಳಲಾರದೆ ಅಟ್ಟದಲ್ಲಿರುವ ಹೊನ್ನು ಚಿನ್ನ ವನ್ನೆಲ್ಲ ಹೇರಿಕೊಂಡು ಆವು ಗೋವುಗಳನ್ನೆಲ್ಲ ಸಾಗಿಕೊಂಡು ಮಂದಲ ಸೀಮೆಗೆ ಹೊರಟರು. ಹತ್ತ ಚಿತ್ತೆ ಮಳೆಯಾಗಿ ಕರುಹೊಳೆ ತುಂಬಿ ಹರಿಯುತ್ತಿತ್ತು ಮುಂದೆ ಇವರಿಗೆ ದಾರಿಯೇ ತೋರದೆ ಗಂಗಮ್ಮನನ್ನು ಬೇಡಿದರು ಒಂದು ಬಂಡಿ ಹೊಳೆ ದಾರಿ ಬಿಡುವಂತೆ ಗಂಗಮ್ಮ ಮಾತಾಡಲಿಲ್ಲ ಮತ್ತೆ ಮತ್ತೆ ಬೇಡಿದರು ನಿನ್ನ ಗಂಗೆ ದಡದಲ್ಲಿ ನೂರುದು ಊರು ಕಟ್ಟುತ್ತೀವಿ ನೂರೂದು ಕೇರಿ ಮಾಡುತ್ತಿವಿ ನಮಗೆ ಆಚೆಗೆ ಬಿಟ್ಟುಕೊಡು ತಾಯಿ ಎಂದು ಬಿದ್ದು ಬಿದ್ದು ಬೇಡಿದರು ಗಂಗಗೆ ಕರುಣೆ ಬಂದಿತು ಕೆಳಗಲ ನೀರೆಲ್ಲ ಬಸ್ತು ಹೋಯಿತು ಮೇಗಲ ನೀರೆಲ್ಲಾ ನಂದಿ ಪರ್ವತವಾಗಿ ನಿಂತು ಹೋಯಿತಂತೆ ಶಿವನೆ!

ಗಂಗೆಯನ್ನು ದಾಟ ಬಂದು ಆಚೆಯ ದಡದಲ್ಲಿ ದೊಡ್ಡ ಗ್ರಾಮವನ್ನು ಕಟ್ಟಿದರು ಗಂಗಗೆ ಬಲಿ ಕೊಡಬೇಕು ಯಾರನ್ನು ಕೊಡಬೇಕೆಂದು ಯೋಚನೆಯಾಯಿತು ನಟ್ಟ ನಡುವೆ ಹುಟ್ಟಿದ ಉದೀರು ಬಪ್ಪರಾಯನಿಗೆ ಇಲ್ಲದ ಹುಚ್ಚು ತೊಳಗೆ ಬಂತಂತೆ ಇಲ್ಲದ ಬೆಪ್ಪು ತೊಳಗ ಬಂದು ಬಿಟ್ಟಿತು ಚಿನ್ನದ ಗಂಡುಗತ್ತರಿ ಮಾಡಿಸಿಕೊಂಡು ನಡು ಗಂಗಗೆ ಹೋಗಿ ಸುಲ್ತಾನ ಮಹಮದನಿಗೆ ದಾರಿಬಿಡಬೇಡ ಎಂದು ಹೇಳಿ ತಲೆಯನ್ನು ಕತ್ತರಿಸಿ ಗಂಗಮ್ಮನಿಗೆ ಅರ್ಪಿಸಿದ ಆಗ ಗಂಗೆ ಇವತ್ತಿನ ದಿನದಲ್ಲಿ ನನ್ನ ಗಂಗೆ ಒಳಗೆ ಒಬ್ಬ ಹತನೆ ಮಾಡಿದರೆ ನನ್ನ ಮುಂದಿನ ಗಂಗಗೆ ಮಗನಾರು? ತುಂಬಿದ ಕೆರೆ ತೂಬೆತ್ತಾರೆಲ್ಲ ಎಂದು ಯೋಚಿಸಿ ಗಂಗೆ ಬೋಪ್ಪರಾಯನ ಪ್ರಾಣವನ್ನು ಪಡೆದಳು ತುಂಬಿದ ಕೆರೆಯಲ್ಲಿ ಮೀನು ಮಿಡಚೆ ಹಿಡಿದುಕೊಂಡು ನನ್ನ ಗಂಗೆ ಮಗನಾಗಿ ಅಂಬಿಗರೋನಾಗಿ ಇರಪ್ಪ ಎಂದು ಹರಸಿದಳು.

ಮುಂದೆ ಕರುಹೊಳೆಯ ತೀರದ ಗ್ರಾಮದ ಗೌಡಗಳು ಹನ್ನೆರಡು ವರ್ಷ ಬದುಕು ಬಾಳು ಮಾಡಿ ನೂರೊಂದು ಕುಲ ಹದಿನೆಂಟು ಪಟಕಟ್ಟು ಹಂಚಿಕೊಳ್ಳಬೇಕೆಂದು ಕುಲಜಾತಿ ಹಂಚುವಾಗ ಕುಂತಿದ್ದವನು ಕುಂಚ ಒಕ್ಕಲಿಗನಾದ ನಿಂತಿದ್ದವನು ನಿಜೊಕ್ಕಲಿಗನಾದ ಬೆಳ್ಳಿ ಹುಟ್ಟಿದಾಗ ಬೆಳ್ಳಿಗುಲದವನಾದ ಹೀಗೆ ಒಂದೊಂದು ಕುಲವಾಗಿ ನಿಂತಾಗ ಹಂದಿನೆಂಟು ಗೌಡಗಳ ಪೈಕಿ ಒಬ್ಬ ಹೆಳವ ಅವನಿಗೂ ಹದಿನೆಂಟರಲ್ಲಿ ಒಂದು ಪಾಲು ತೆಗೆದರು ಎಲ್ಲರೂ ತಮ್ಮ ಹೆಂಡ್ತೀ ಮಕ್ಕಳು

ಕಟ್ಟಿಕೊಂಡು ಅವರ ಇಚ್ಚೆ ಬಂದ ಕಡೆ ಹೋದರು ಹೆಳವನನ್ನು ಯಾರು ಮಾತಾಡಿಸಲಿಲ್ಲ ಅನ್ನ ನೀರು ಇಲ್ಲದೇ ಹೆಳವ ಕಣ್ಣೀರು ಹರಿಸುತ್ತಿದ್ದ.ಗಂಗಗೆ ಬಿದ್ದು ಪ್ರಾಣ ಬೀಡಬೇಕೆಂದು ಹೆಳವ ಕಾಲಿಲ್ಲದ್ದರಿಂದ ಊರುಳಿಕೊಂಡು ಹೋಗುತ್ತಿತ್ತದ್ದ ದನ್ನು ಶವ ಪಾರ್ವತಿಯರು ನೋಡಿದರು ನೂಲೋಣಿಯಲ್ಲಿ ಇಳಿದು ಬಂದು ಅವನ ಕಷ್ಟವನ್ನು ವಿಚಾರಿಸದರು ಅವನಿಗೆ ಶಿವಚಿತ್ತ ಕೊಟ್ಟು ನೀನು ಬಸವೇಶ್ವರ ಎಲ್ಲಿ ಹೋಗುವದಾದರೆ ಅಲ್ಲಿಗೆ ಹೋಗಿ ಶ್ರೀಶೈಲವನ್ನು

ಸೇರಿಕೋ ಎಂದರು ಶ್ರೀಶೈಲ್ ದಲ್ಲಿ ಹೆಳವನಿಗೆ ಮಲ್ಲಿಕಾರ್ಜುನ ಗುರುವು ಸಿಕ್ಕರು ಆದಿಗೌರಮ್ಮನ ಮಕ್ಕಳಲ್ಲಿ ಒಬ್ಬಳನ್ನು ಹೆಂಡತ್ತಿಯಾಗಿಯೂ ಪಡೆದ ಅವನ ಹೊಟ್ಟೆಯಲ್ಲಿ ಹದಿನೆಂಟು ಮಂದಿ ಗಂಡು ಮಕ್ಕಳು ಹುಟ್ಟಿದರು ಶಿವನ ಇಚ್ಚೆಯಂತೆ ಕುಲಜಾತಿಯನ್ನು ಹಂಚಿಕೊಂಡು ಅವರ ಮನೆಯ ಬಾಗಿಲಿಗೆ ಹೊಗಿ ಧರ್ಮದ ಪಾಲನ್ನು ಹಂಚಿ ತನ್ನ ಧರ್ಮದ ಪಾಲನ್ನು ಉಳಿದ ಅಣ್ಣಂದಿರರಿಂದ ಪಡೆಯುವ ಅವಕಾಶ ಅವನಿಗೆ ಲಭ್ಯವಾಯಿತು ಹೆಳವ ಪರಂಪರೆ ಹೀಗೆ ಬೆಳೆದು ಬಂದಿತು.

ಪುರಾಣ – ೧೧

ಅನೇಕ ಶತಮಾನಗಳ ಇತಿಹಾಸ ಇರುವ ಹೆಳವರ ಬಗ್ಗೆ ಏನಾದರು ಗ್ರಂಥಗಳ ಆಧಾರಗಳಿವೆಯೇ ಎಂದು ನೋಡಿದಾಗ ಪಾಲ್ಕುರಿಕೆ ಸೋಮನಾಥನು ರಚಿಸಿದ ಪಂಡಿತಾರಾಧ್ಯ ಚರಿತ್ರೆ ಎಂಬ ದ್ವಿಪದ ಕಾವ್ಯದಲ್ಲಿ ಶ್ರೈಶೈಲ್ ಪರ್ವತವನ್ನು ಏರುತ್ತಿದ್ದ ಪಿಚ್ಚುಕುಂಟಲು ಎಂಬ ಬಿಕ್ಷುಕರ ವರ್ಣನೆ ಇರುವುದನ್ನು ಕಾಣಬಹುದು ಶ್ರೀಶೈಲಕ್ಕರೆ ಹೋಗುವ ಭಕ್ತರನ್ನು ದಾನ ಮಾಡಿದರೆಂದು ಪಿಚ್ಚಕುಂಟರು ಬೇಡುತ್ತಾರೆ ಆ ಪಿಚ್ಚ ಕುಂಟರ ವರ್ಣನೆ ಹೀಗೆದೆ.

ಶರೀರದ ಮೇಲ್ಬಾಗ ಬಹು ಸುಂದರ ಕೆಳಗಿನ ಭಾಗ (ಕಾಲು,ಬೆರಳು ಕುಂಡೆಗಳು)ಲೋಪಭೂಯಿಷ್ಟ ಬೆರಳುಗಳಲ್ಲಿದ ಪಾದಗಳು ಮಣ್ಣಿನಿಂದ ಮಾಡಲ್ಪಟ್ಟ ಕಾಲುಗಳು ತೊಗಲಿನಿಂದ ಮಾಡಲ್ಪಟ್ಟ ಕಾಲುಗಳು ಕಾಲುಗಳು ಚಿಕ್ಕ ಚಿಕ್ಕ ಕೈಗಳು ತೊಗಲು ಕೈಗಳು ಈ ಅಂಗವಿಹೀನರಾಗಿಯೂ ಸಣ್ಣ ಕಾಲುಗಳು ಗಿಡ್ಡ ಇರುತ್ತಾರೆ.ಇವರು ತಮ್ಮ ಸ್ತ್ರೀಯರನ್ನು (ಇವರು ಹೇಗಿದ್ದರೋ ತಿಳಿಯದು) ಆಶ್ರಿತರನ್ನು ಯಾತ್ರಿಕರಿಗೆ ತೋರಿಸಿ ದೈನ್ಯತೆಯ ನೋಟುಗಳನ್ನು ಬೀರಿ ಕರುಣಾರಸವು ಉಕ್ಕಿ ಬರುವಂತೆ ಬೇಡಿಕೊಳ್ಳುತ್ತಿದ್ದರು ಕಹಳೆಗಳನ್ನು ಹಿಡಿದು ನೇತಾಡುವ ಜಡೆಗಳಿಂದ ಕೂಡಿ ಕೋಣಗಳನ್ನು ಎತ್ತುಗಳನ್ನು ಹತ್ತಿ ಜನರೆಲ್ಲರೂ ದಾನಮಾಡಿರೇ ಬಸವ ದಂಡನಾಯಕ ಬಹಳ ಒಳ್ಳೆಯ ದಾತ ಅವನು ದೀನರನ್ನು ಬೇರೆ ದೇಶಗಳಿಗೆ ಕಲುಹಿಸದೆ ಭೂದಾನ ಇತ್ಯಾದಿ ದಾನಗಳನ್ನು ಕುದರೆ ಎತ್ತುಗಳನ್ನು ಕೊಡುತ್ತಿದ್ದ ಅಂತಹ ದಾನಿ ಈ ಪ್ರಪಂಚದಲ್ಲಿ ಇಲ್ಲವೇ ಮಲ್ಲಿನಾಥನೇ! ದೀನರನ್ನು ಬಾರೋ ಎಂದು ಕರೆದು ಗೃಹದಾನ ಇತ್ಯಾದಿಗಳನ್ನು ಮಾಡುತ್ತಿದ್ದ ಸಿರಿಯಾಲಶೆಟ್ಟಿ ಸುಂದು ಬಲ್ಲಹನ ವೀರಚೋಳ ಕರಿಕಾಲಚೋಳ ಅರಿಯಮರಾಜ ಏಣಾಧಿನಾಥಯ್ಯಾ ಚೇಮರಾಜ ಕರಿಯೂರಿ ಚೋಡ ಶಿವಲಿಂಗದೇವ ಸಿದ್ದರಾಮಯ್ಯಾ ಸವರದ ನಾಚಯ್ಯಾ ಸರಿಮದೇವ ಮುಂತಾದವರನ್ನು ಹೋಲುವ ಸ್ವಾಮಿ ಭಕ್ತನು ಪ್ರಪಂಚದಲ್ಲಿ ಬೇರೊಬ್ಬನಿಲ್ಲವೇ ಮಲ್ಲಿನಾಥನೇ! ನಾವು ಕುರುಬರು ಪಿಚ್ಚಗುಂಟುರು ನಮ್ಮನ್ನು ಬಾರೋ ಎಂದು ಕರೆದು ಕರುಣೆಯಿಂದ ನಮ್ಮ ಮಾತುಗಳನ್ನು ಕೇಳಿ ಅಯ್ಯೋ ಏನ್ನರೇ! ನಮ್ಮ ಮೇಲೆ ದಯೆ ತೋರೊರಪ್ಪ ಸುಂಕರ ಬಂಕಯ್ಯಾ ಸುರಿಯ್ಯಾ ಬಂಕಯ್ಯಾ ಸುರಿಯಾ ಚೌಡಯ್ಯಾ ಶಂಕರ ದಾಸಯ್ಯಾ ಲೆಂಕ ಮಂಚಯ್ಯಾ ದೇವರ ದಾಸಯ್ಯಾ ತೆಲುಗು

ಬೋಮ್ಮಯ್ಯಾ ಬಾಪೂರಿ ಬ್ರಹ್ಮಯ್ಯಾ ಬಾಚೀರಾಚಯ್ಯಾ ಇಂತಹ ಭಕ್ತರನ್ನು ಹೋಲುವ ಸ್ವಾಮಿ ಭಕ್ತರು ಈ ಭೂಮೀಯಲ್ಲಿ ಬೇರೋಬ್ಬರಿಲ್ಲವೆ ಮಲ್ಲಿನಾಥನೇ ಹೀಗೆ ಹಾಡುತ್ತಾ ದಾನ ಮಾಡಿರೇ ಎಂದು ಬೇಡುತ್ತಾ ಪಿಚ್ಚ ಕುಂಟರ ಸಮೂಹ ಬಂದಿತು ಅಲ್ಲದೆ ಈ ಪಿಚ್ಚಕುಂಟರೆಲ್ಲರೂ ವೀರಶೈವರಾಗಿದ್ದರೆಂದೂ ಇವರ ಕಂಠಗಳಲ್ಲಿ ಲಿಂಗ ಕೊರಳಲ್ಲಿ ರುದ್ರಾಕ್ಷಿಮಾಲೆ ಕಿರೀಟ ಇದ್ದುವೆಂದು ವರ್ಣಿಘಸಲಾಗಿದೆ.

ಈ ವರ್ಣನೆ ಅನೇಕ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ.ಬಿಕ್ಷುಕರ ವಿವರವಾದ ವರ್ಣನೆ ಇದೆ ಅವರ ವಾಹನಗಳೆನೆಂದೂ ಹೇಳಿದೆ.ಕೋಣಗಳು ಅವರ ವಾಹನಗಳಾಗಿದ್ದವೆಂಬುದು ವಿಶೇಷ ಗಮನಾರ್ಹ ಅವರಿಗೆ ಒಮ್ಮೆ ಆಶ್ರಯ ದಾತನಾಗಿದ್ದ ಬಸವಣ್ಣ ಮುಂತಾದವರ ಉಲ್ಲೇಖವಿದೆ. ಅವರೆಲ್ಲ ವೀರಶೈವರಾಗಿ ಲಿಂಗದಾರಿಗಳಾಗಿದ್ದರೆಂದೂ ಹೇಳಲಾಗಿದೆ.

### ಪುರಾಣ – ೧೨

ಕಲ್ಯಾಣಕಾರಿ ಪಟ್ಟಣದಲ್ಲಿ ಮುಕ್ಕಾಳು (ಮುಕ್ಕಾದ ಕಾಲು – ಊನಾದ ಕಾಲು) ಭೃಂಗೀಶ್ವರನು ಬಿಕ್ಷೆ ಬೇಡಿ ಜೀವಿಸುತ್ತಿದ್ದ ಆಗ ರಾಜ್ಯ ಆಳುತ್ತಿದ್ದ ರಾಜ ಜೈನ ಮತದ ಬಿಜ್ಜಳ ಅವನ ಮಂತ್ರಿ ಶಿವಾಚಾರದ ಬಸವಣ್ಣ ಎಲ್ಲೆಲ್ಲೂ ಶಿವಾಚಾರವನ್ನೆ ಹೆಚ್ಚಿಸಬೇಕೆಂದು ಬಸವಣ್ಣನನ ಆಸೆ ಕಾಲಿಲ್ಲದ ಹೆಳವ (ಭೃಂಗಿಶ್ವರ)ನನ್ನು ಕರೆದು ನೀನು ಕುಂಟದ್ದೀ ನಾನು ಕೊಟ್ಟಂತ ನಂದಿ ಹತ್ತಿಕೊಂಡುಇ ಬಿಕ್ಷೆ ಆಡಿಕೊತ್ತಿರು ಅಂತ ಓಂ ಶಿವಾ ಎಂವ ಶಬ್ದ ಆ ಗಂಟೆಯಿಂದ ಕೆಳಿಬಂತು ಹೆಳವನು ವಂಶಾವಳಿ ಕುಲಬೆಡಗ ಹೇಳಲು ಪ್ರಾರಂಭಿಸಲಾಗಿ ಹುಡುಗರು ಅವನ ನಂದಿವಾಹನನ್ನು ಹಿಂಬಾಲಿಸಿದರು ಎಲ್ಲೋಲ್ಲೋಶಿವನ ಶಬ್ದ ಹೆಚ್ಚಾಯಿತು ಲಿಂಗಾಯತ ಮತ ಹೆಚ್ಚಿತು ಬಿಜ್ಜಳನಿಗೆ ಚಿಂತೆ ಉಂಟಾಯಿತು.ಶಿವಾ ಆಂದೋನ ನಾಲಿಗೆ ಕೊಯ್ಯಬೇಕು ವಿಭೂತಿ ಹಚ್ಚಿದೋನ ಹಣೆ ಕೆತ್ತಬೇಕು ಎಂದುಇ ಆಜ್ಞೆ ಮಾಡಿದನು ಕ್ರಮೇಣ ಕಲ್ಯಾಣಪುರಿ ಹಾಳಾಗಿ ಪಟ್ಟಣ ಒಡೆದು ಹಡಿನೆಂಟು ಜಾತಿ ಆಗಿ ಜನರು ಬೇರೆ ಬೇರೆ ಕರೆ ಹೊರಟು ಹೋದರು ಆದರೆ ಹೆಳವ ಮಾತ್ರ ಅಲ್ಲಿಯೇ ಉಳಿದ ಆಗ ಪರಮೇಶ್ವರ ಪ್ರತ್ಯೇಕ್ಷನಾಗಿ ನಾಲಿಗೆ ಮೇಲೆ ನಾಲಕ್ಷರ ಬರೆದು ನಿನ್ನ ಬಾಯಲ್ಲಿ ಏನ್ ವಚನ ಬರುತ್ತದೆಯೋ ಅದು ಸುಳ್ಳಾಗಬಾರದು ಎಂದು ಹೇಳಿದ ಅದರಂತೆ ಹೆಳವ ಎತ್ತಿನ ಮೇಲೆ ಕುಳಿತು ಹೊರಟ ಕಲ್ಯಾಣಪುರಿ ಬಿಟ್ಟು ಬೇರೆ ಬೇರೆ ಊರುಗಳಲ್ಲಿ ನೆಲೆಸಿದ್ದ ವರೆಲ್ಲಿಗೆ ಅವನು ಹೋಗಿ ನೀವು ಕಲ್ಯಾಣಪುರಿಯಿಂದ ಬಂದೋರು ನಿಮ್ಮ ತಾತ ಮುತ್ತಾತ ಇಂಥವ್ರೂ ನಿಮ್ಮ ಬೆಡಗು ಇಂಥಹೆದು ಹೀಗೆಲ್ಲಾ ಹೇಳುತ್ತಾ ಅವರನ್ನು ಸಂತೋಷ ಪಡಿಸಿದ ಅವರು ಅವನಿಗೆ ಹತ್ತುವುದಕ್ಕೆ ಎತ್ತು ಉಡುವುದಕ್ಕೆ ಬಟ್ಟೆ ಕೊಟ್ಟರು ಈ ಹೆಳವನಿಂದಲೇ ಹೆಳವ ಸಂತತಿ ಮುಂದುವರೆಯುತು.

ಪುರಾಣ – ೧೩

ಇನ್ನೊಂದು ಕತೆ ಭಾಗಲಕೋಟ ತಾಲೂಕು ಮುಗಳೊಳ್ಳಿ ಹೆಳವರಿಂದ ಸಂಗ್ರಹಿಸಿದ್ದು ಅದೇನಂದರೆ ಕಕ್ಕಯ್ಯಾ ಕವೂರಯ್ಯಾ ಏಕ್ಕಿದ ಮಾರಯ್ಯಾ ಗಟ್ಟಿತಾಳ ಸಿದ್ದ ಯ್ಯಾ ಹಡಪಣ ಹಂಪಯ್ಯಾ ಗುಂಡು ಬ್ರಹ್ಮಯ್ಯಾ ಮಾದರ ಕ್ಯಾತಯ್ಯಾ ಅಂಬಿಗರ ಚೌಡಯ್ಯಾ ಇತ್ಯಾದಿ ೮೨ ಶರಣರೊಳಗೆ ಹೇಳಯ್ಯನವರು ಒಬ್ಬರುಇ ಈ ಹೇಳಯ್ಯನವರನ್ನು ಕಂಡರೆ ಬಸವಣ್ಣನವರಿಗೆ ತುಂಬಾ ಅಭಿಮಾನ ಕಲ್ಯಾಣ ಮಂಟಪದಲ್ಲಿ ಬಸವಣ್ಣನವರು ತಮ್ಮ ನಿಯಮದಂತೆ ನಿತ್ಯವು ಒಂದು ಲಕ್ಷತೋಂಬತ್ತಾರು ಸಾವಿರ ಗಣಂಗಳಿಗೆ ಅನ್ನ ಪ್ರಸಾದ ಕೊಡುತ್ತಿದ್ದ ಕಾಲದಲ್ಲಿ ಹೇಳಯ್ಯನವರನ್ನು ಈ ಕಾರ್ಯಕ್ಕೆ ಮೇಲ್ವಿಚಾರಕರನ್ನಾಗಿ ನೇಮಿಸಿದರು. ಮೊದ ಮೊದಲು ನಯ ವಿನಯದಿಂದಲೇ ಮೇಲ್ವಿಚಾರಣೆ ಕೆಲಸ ಮಾಡುತ್ತಿದ್ದ ಹೇಳಯ್ಯನವರಿಗೆ ಈ ಕಾರ್ಯಕ್ಕೆ ಅಧಿಕಾರದ ಮತ್ತು ತಲೆಗೇರಿತ್ತು ಈ ಸುದ್ದಿ ತೀಳಿದ ಬಸವಣ್ಣನವರು ಹೇಳಯ್ಯಾನವರ ಅಹಂಕಾರವನ್ನು ಪರೀಕ್ಷೆ ಮಾಡಿ ನೀವು ಕಾಡಿ ಬೇಡಿಕೊಂಡು ತಿನ್ನಿ ಎಂದು ಶಾಪಕೊಟ್ಟರೆ ಈಗ ಇರುವವರು
(ಹೆಳವರು) ಈ ಹೇಳಯ್ಯಾನವರ ವಂಶಸ್ಥರು ಹೆಳವ ಜಾತಿ ಉತ್ಪತ್ತಿಯಾದುದೇ ಹೇಳಯ್ಯಾನವರಿಂದ.

ಹೇಳಯ್ಯನವರಿಗೆ ಇದ್ದುದ್ದು ಒಂದೇ ಕಾಲು ಆದ್ದರಿಂದ ಅವರನ್ನು ಒಕ್ಕಾಲು ಭೃಂಗಿಶ್ವರ ಎಂದು ಕರೆಯುತ್ತಿದ್ದರಂತೆ
ಬಸವಣ್ಣನವರ ಪ್ರಭಾವದಿಂದಾಗಿ ಅವರಿಗೆ ಲಿಂಗಾಧಾರಣೆಯು ಆಗಿತ್ತು ಈಗ ಕಪ್ಪ ಕಡಿ (ಮೌಂಸ ಇತ್ಯಾದಿ) ತನ್ನೋದು ಕುಡಿಯೋದು ಇದೇ ಅಂತ ಹೇಳಿ ಹೇಳಯ್ಯನವರಿಗೆ ಲಿಂಗದಾರಣೆಯಾಗಿದ್ದ ವಿಷಯವನ್ನು ಬೇಕೇಂದೆ ಕೆಲವರು ಮುಚ್ಚಿಡುತ್ತಾರೆ.

ಪುರಾಣ – ೧೪

ಇವಕ್ಕಿಂತಲೂ ಇನ್ನು ಹೆಚ್ಚು ವಾಸ್ತಿವಿಕವಾದ ಅಂಶಗಳು ಬಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕು ಹಂದ್ರಾಳದಿಂದ ವಲಸೆ ಬಂದು ಚಿಕ್ಕಮಂಗಳೂರು ಜಿಲ್ಲೆ ಕಡೂರಿನಲ್ಲಿ ನೆಲೆಸಿರುವ ಹೆಳವರಿಂದ ದೊರೆಯುತ್ತದೆ.ಅವೇನೆಂದರೆ ಹೆಳವ ಜಾತಿಯ ಬಸವಣ್ಣನವರ ಕಾಲದಲ್ಲಿ ಉದ್ಬವಿಸಿತು ಅವರು ತಮ್ಮ ರಾಜ್ಯಗಳಲ್ಲಿಯ ಹಳ್ಳಿಗಳಲ್ಲಿ ಇದ್ದ ಜನರ ಜನನ ಮರಣ ದಾಖಲೆಗಳನ್ನು ಬೇರೆ ಸ್ಥಳಗಳಿಂದ ತಮ್ಮ ರಾಜ್ಯಕ್ಕೆ ಬಂದ ಜನರನ್ನು ಕಂಡು ಹಿಡಿಯುವುದಕ್ಕೂ ಕೆಲವು ಜನರನನು ನೇಮಿಸಿ ಇಂತಿಂಥ ಹಳ್ಳಿಗಳಿಗೆ ಅವರಿಗೆ ವಹಿಸಿದ್ದರು ಆ ಹಳ್ಳಿಗಳಿಗೆ ಹೋಗಲು ಅನುಕೂಲವಾಗಲೆಂದು ಅವರಿಗೆ ಮಾತ್ರ ಎತ್ತುಗಳನ್ನು ಒದಗಿಸಿದರು ಈ ಎತ್ತುಗಳು ಮೇಲೆ ಹಳ್ಳಿಗಳ ಮನೆ ಮನೆಗ ಹೋಗಿ ವಹಿಸಿದ ಕಾಯಕ ಮಾಡುತ್ತಿದ್ದವರಿಗೆ ಹೆಳವರು ಎಂದು ಹೆಸರಿಟ್ಟರು ಬಸವಣ್ಣನವರು ಕೆಲವು ಕುಂಟರನ್ನು ಈ ಕಾಯಕಕ್ಕೆ ನೇಮಿಸಿದ್ದರಿಂದ ಅವರ ವಂಶಜರೆಲ್ಲರೂ ಹೆಳವ ಜನಾಂಗದವರೆಂದು ಮುಂದುವರೆದರು".೧೪

ಹೀಗೆ ಅನೇಕ ಪೌರಾಣಿಕ ಹಿನ್ನೆಲೆಯಲ್ಲಿ ಹೆಳವರ ಮೂಲವನ್ನು ಸೃಷ್ಟಿಸಿದಂತೆ ಜನಪದ ಕಥೆಗಳಲ್ಲೂ ಹೆಳವರ ಬಗ್ಗೆ ಉಲ್ಲೇಖ ಕಾಣ ಬರುತ್ತದೆ.

## ಹೆಳವ ಸಮುದಾಯದ ಕುರಿತು ಕಥೆಗಳು

ಹೆಳವರ ಕುರಿತು ಮೇಲಿನ ಕಥೆಗಳು ಪುರಾಣಗಳು ಜೊತೆ ತಮ್ಮನ್ನು ಸಮೀಕರಿಸಿಕೊಳ್ಳುತ್ತವೆ.ಪುರಾಣದ ಮತ್ತು ಇತಿಹಾಸದ ಕೆಲವು ವ್ಯಕ್ತಿಗಳು ಈ ಕಥೆಗಳಲ್ಲಿ ಕಾಣಿಸಿಕೊಳ್ಳುತ್ತಾರೆ ಹೆಳವರ ಕುರಿತು ಕೆಲವು ಕಥೆಗಳು ಇವೆ ಅವುಗಳನ್ನು ಇಲ್ಲಿ ಉಲ್ಲೇಕಿಸಳಾಗಿದೆ.

ಕಥೆ – ೧

"ಒಕ್ಕಲಿಗರು, ಕುರುಬರು,ಲಿಂಗಾಯತರ, ಈ ಮೂವರು ದಾಯಾದಿಗಳೆಂದು ಹೇಳುವ ಹೆಳವರು ಆಸ್ತಿ ಪಾಸ್ತಿಯಲ್ಲಿ ಹಿಸ್ಸೆಯಾದಾಗ ತಮ್ಮ ಪಾಲೆಲ್ಲ ಈ ಮೂವರು ಮನೆತನದವರೆಗೆ ಕೊಡಲ್ಪಟ್ಟಿತ್ತೆಂದು ಅವರೆಲ್ಲರೂ ವರ್ಷ ವರ್ಷ ತಮ್ಮ ಕಾಳು ಕಡಿಗಳನ್ನು ಕೊಟ್ಟು ನೇರವಾಗುತ್ತಿದ್ದರೆಂದು ಹೇಳಿ ಇದಕ್ಕೆ ಕಾರಣವಾದ ಹೆಳವನ ಕಥೆಯನ್ನು ಹೇಳುತ್ತಾರೆ ನಾಲ್ಕು ಜನ ಅಣ್ಣ ತಮ್ಮಂದಿರಲ್ಲಿ ಕೊನೆಯವನು ತುಂಟನಂತೆ ಅವನು ಆಸ್ತಿ ಪಾಸ್ತಿಯನ್ನು ತೆಗೆದುಕೊಂಡು ಪ್ರತಿವರ್ಷವೂ ಬೆಳೆದ ಕಾಳುಕಡಿಯನ್ನು ಅವನಿಗೂ ಹಂಚುತ್ತಿದ್ದರಂತೆ ಕುಂಟನಾದುದುರಿಂದ ಕಿರಿಯವನನ್ನು ಹೆಳವಯ್ಯನೆಂದು ಕರೆಯುತ್ತಿದ್ದರಂತೆ ಹೆಳವಯ್ಯನಿಗೆ ಮದುವೆ ಮಾಡಬೇಕೆಂದಾಗ ಕುಂಟನಿಗೇಕೆ ಮದುವೆ? ಎಂದು ಎಲ್ಲರೂ ಅಣಕಿಸಿ ಹೆಣ್ಣು ಕೊಡಲಿಲ್ಲವಂತೆ ಆಗ ತೆಲಗು ದೇಶದ ಕುಟುಂಬದವರುಕಡು ಬಡವರು ಆಗಿದ್ದರಿಂದ ಹೊಟ್ಟೆಗಿಲ್ಲದೆ ಸಾಯುವುದಕ್ಕಿಂತ ಆ ಕುಂಟನ ಮನೆಯಲ್ಲಾದರೂ ಬದುಕಿಕೊಳ್ಳಲಿ ಎಂದು ಹೇಳಿ ತಮ್ಮ ಮಗಳನ್ನು ಹೆಳವಯ್ಯನಿಗೆ ಧಾರೆ ಎರೆದು ಕೊಟ್ಟಂತೆ ಇದರಿಂದಾಗಿ ಹೆಳವಯ್ಯಾನ ಮಕ್ಕಳು ಮಾತೃಭಾಷೆ ತೆಲಗಾದರೂ ವ್ಯವಹಾರ ಭಾಷೆ ಕನ್ನಡವಾಯಿತು. ಪಡೆದ ವ್ಯಕ್ತಿ ತ್ರಿಮೂರ್ತೀಗಳ ಗೋತ್ರ ಹೇಳಿದ ಕಾಲು ಊನಗೊಂಡ ಈ ವ್ಯಕ್ತಿಯನ್ನು ಗೋತ್ರಗಳನದ್ನು ಹೇಳಲೆಂದೇ ತ್ರಿಮೂರ್ತಗಳು ಬೂಮಿಗೆ ಕಳುಹಿಸಿದರು.

೪) ಮಕ್ಕಳಾಗದ ಏಳು ಜನ ಹೆಣ್ಣು ಮಕ್ಕಳಿಗೆ ವರದ ರೂಪದಲ್ಲಿ ಶಿವ ಅವರಿಗೆ ಕುಂಟ ವ್ಯಕ್ತಿಯನ್ನು ನೀಡುತ್ತಾನೆ ಅವರು ಏಳು ಮಕ್ಕಳನ್ನು ಪಡೆಯುತ್ತಾರೆ ಮತ್ತು ಇವರೇ ಹೆಲವರಾಗುತ್ತಾರೆ ಕುಂಟ ವ್ಯಕ್ತಿ ಹೆಳವರ ಮೂಲ ಪುರುಷನಾಗುತ್ತಾನೆ.

೫) ಒಕ್ಕಾಲ ಭೃಂಗಿ ಶಿವ ಪಾರ್ವತಿಯರ ಮಗ ಈತ ಶಿವ ಪಾರ್ವತಿಯರಿಗೆ ನಮಿಸುವಾಗ ಶಿವನಿಗೆ ಹೆಚ್ಚು ಮಹತ್ವ ನೀಡಿರುತ್ತಾನೆ.ಪಾರ್ವತಿ ಸಿಟ್ಟಾಗಿ ಅವನನ್ನು ಶಪಿಸುತ್ತಾಳೆ.ಅವಳ ಶಿಕ್ಷೆಯಿಂದ ಭೃಂಗಿಗೆ ಶಾಶ್ವತ ವೈಕಲ್ಯ ಪ್ರಾಪ್ತಿಯಾಗುವಂತೆ ಶಿವ ನಂದಿನಿಯನ್ನು ಭೃಂಗಿಗೆ ಕೊಟ್ಟು ಭೂಲೋಕಕ್ಕೆ ಹೋಗಿ ಬಿಕ್ಷೆ ಬೇಡಿ ಬದುಕಲು ಹೇಳುತ್ತಾನೆ.

೬) ಕೃಷಿಕನೊಬ್ಬನ ಏಳು ಜನ ಗಂಡು ಮಕ್ಕಳಲ್ಲಿ ಒಬ್ಬ ಒಂಟಿಕಾಲಿನವರು ಸಹೋದರರು ಅವನನ್ನು ತಾತ್ಸಾರದಿಂದ ನೋಡಿ ಅವನಿಗೆ ಆಸ್ತಿಯಲ್ಲಿ ಪಾಲು ಕೊಡದೇ ಇದ್ದಾಗ ಈತ ಕಲ್ಯಾಣಕ್ಕೆ ಬಂದು ಬಸವಣ್ಣನ ಅಣತಿಯ ಮೇರೆಗೆ ಮನೆಗೆ ಹೋಗಿ ಬಿಕ್ಷೆ ಬೇಡಿ ಬದುಕಲಾರಂಭಿಸುತ್ತಾನೆ.ಈತನ ಮಕ್ಕಳೆ ಮುಂದೆ ಹೆಳವರಾದರು.

೭) ಒಕ್ಕಲಿಗ ಕುರುಬ ಲಿಂಗಾಯತರು ಮತ್ತು ಹೆಳವರು ದಾಯಾದಿಗಳು ಇವರು ತಮ್ಮ ಆಸ್ತಿಯನ್ನು ಪಾಲು ಮಾಡಿಕೊಳ್ಳುವಾಗ ಹೆಳವರ ಮೂಲಪುರುಷನಾದ ಕೊನೆಯವನು

ಕುಂಟನಾಗಿದ್ದ ಕಾರಣಕ್ಕೆ ಈ ಮೂರು ಜನ ದಾಯಾದಿಗಳು ಅವನಿಗೆ ಆಸ್ತಿಯಲ್ಲಿ ಪಾಲು ಕೊಡದೆ ವರ್ಷಕ್ಕೆ ನಿಗದಿತ ಪ್ರಮಾಣದಲ್ಲಿ ಕಾಳು ಕಡಿಯನ್ನು ಕೊಡಲಾರಂಬಿಸಿದರು ಈ ಕುಂಟನಿಗೆ ಯಾರು ಹೆಣ್ಣು ಕೊಡದೆ ಇದ್ದಾಗ ಕಡು ಬಡವರಾದ ತೆಲುಗರು ಈತನಿಗೆ ಹೆಣ್ಣುಕೊಟ್ಟರು ಈತನಿಗೆ ಮಕ್ಕಳಾಗಿ ಮುಂದೆ ಇವರೇ ಹೆಳವರಾದರು ಈ ಕಾರಣಕ್ಕಾಗಿ ಮನೆ ಭಾಷೆ ತೆಲಗಾಯುತು ಮತ್ತು ವ್ಯವಹಾರ ಭಾಷೆ ಕನ್ನಡವಾಯಿತು.

ಈ ಮೇಲಿನ ಅಂಶಗಳನ್ನು ಗಮನಿಸಿದರೆ ಹೆಳವರ ಮೂಲ ಪುರುಷ ಹುಟ್ಟುತ್ತಲೇ ಅಂಗವಿಕಲನಾಗಿ ಹುಟ್ಟುತ್ತಾನೆಇಲ್ಲವೇ ದೇವತೆಗಳ ಸಿಟ್ಟಿಗೆ ಕಾರಣವಾಗಿ ಅಂಗವೈಕಲ್ಯ ಅನುಭವಿಸುತ್ತಾನೆ.ಒಟ್ಟನಲ್ಲಿ ಅಂಗವೈಕಲ್ಯ ಈ ಮೂಲ ಪುರುಷನ ಸಾಮಾಜಿಕ ಮತ್ತು ಆರ್ಥಿಕ ಬದುಕನ್ನು ರೂಪಿಸುವಲ್ಲಿ ಪ್ರದಾನ ಪಾತ್ರ ವಹಿಸುತ್ತದೆ. ಮುಖ್ಯವಾದ ಸಂಗತಿ ಯಾವುದೆಂದರೆ ಹೆ:ಳವರ ಮುಲ ಪುರುಷ ಒಂದು ಕೃಷಿಕ ಕುಟುಂಬದಿಂದ ಬಂದವನು ಮತ್ತು ಏಳು ಜನ ಮಕ್ಕಳಾಗದೆ ಪರಿತಪಿಸುತ್ತಿದ್ದ ಪಶುಪಾಲಕ ಗೊಲ್ಲ ಸಮುದಾಯಕ್ಕೆ ಸೇರಿದ ಹೆಣ್ಣೂ ಮಕ್ಕಳನ್ನು ಮದುವೆಯಾಗುವನು ಮತ್ತೊಂದು ಕಥೆಯಲ್ಲಿ ಈತ ತನ್ನದಲ್ಲದ ಭಾಷೆಯಾದ ತೆಲುಗರ ಬಡ ಕುಟುಂಬದ ಮಹಿಳೆಯನ್ನು ಮದುವೆಯಾಗುತ್ತಾನೆ.ಕೈಲಾಸದ ಗಣಗಳಲ್ಲಿ ಪ್ರಮುಖವಾದ ಈತ ಧರ್ಮವನ್ನು ಉಳಿಸಲು ಭೂಮಿಗೆ ಬಂದವನು ಮತ್ತು ಈತನ ಎಲ್ಲಾ ಆಗು ಹೋಗುಗಳಲ್ಲಿ ಶಿವ ಪ್ರಮುಖ ಪಾತ್ರವಹಿಸುತ್ತಾನೆ.ಸಾಮಾನ್ಯವಾಗಿ ಈ ಬಗೆಯ ಅಲೆಮಾರಿ ಸಮುದಾಯಗಳ ಸೃಷ್ಠಿ ಪುರಾಣಗಳಲ್ಲಿ ಶಿವ ಆಪತ್ ರಕ್ಷಕನಾಗಿನಿಲ್ಲುವುದು ಸಹಜ ಹುಟ್ಟುತ್ತಾ ಕೃಷಿಕನಾಗುವ ಹೆಳವನು ಪಶುಪಾಲಕ ಗೊಲ್ಲ ಮಹಿಳೆಯರನ್ನು ಮದುವೆಯಾಗಿ ಎರಡು ಭಿನ್ನ ಸಮುದಾಯಗಳ ನಡುವೆ ಸೇತುವೆಂಯಾಗುತ್ತಾನೆ ಈ ಸಂಸರ್ಗದಿಂದ ಹೆಳವ ಸಮುದಾಂಯು ರೂಪಗೊಳ್ಳುತ್ತದೆ.ಹೆಳವರು ಕೃಷಿಕ ಸಮುದಾಯವನ್ನು ಆಶ್ರಮಿಸಿಯೇ ತಮ್ಮ ಪಾರಂಪರಿಕ ಕುಲಕಸಬನ್ನು ರೂಢಿಸಿಕೊಂಡು ಬಂದಿದ್ದಾರೆ.ಈ ಆರ್ಥಿಕ ಅವಲಂಬನಯೇಅವರಿಗೆ ಅಲೆಮಾರಿತನವನ್ನು ದಯಪಾಲಿಸದೆ ಮತ್ತು ಈ ಅಲೆಮಾರಿತನಕ್ಕೆ ಮುಖ್ಯವಾಗಿ ಬಳಸುವುದು ಎತ್ತನ್ನು ಎತ್ತು ಕೃಷಿ ಸಂಸ್ಕ್ರತಿಯನ್ನು ಪ್ರತಿನಿಧಿಸುವ ಪ್ರಾಣಿ.

ಪೌರಾಣಿಕವಾಗಿ ಹೀಗೊಂದು ವಿಲಕ್ಷಣ ಸನ್ನಿವೇಶದಲ್ಲಿ ಹೆಳವರ ಮೂಲ ಪುರುಷ ಪಡೆಯುವ ಅಂಗ ವೈಕಲ್ಯ ಅವಲಂಬಿಸುತ್ತಿರುವ ವೃತ್ತಿ ಮತ್ತು ಅನ್ನು ಸಮುದಾಯದ ಜೊತೆಗಿನ ಸಂರತನ ಇಂದಿಗೂ ಹೆಳವ ಸಮಾಜದ ಪರಿಪ್ರೇಕ್ಷದಲ್ಲಿ ಇವೆಲ್ಲ ಸಂಕೇತ ಮಟ್ಟದಲ್ಲಿ ತನ್ನ ಕುರುಹುಗಳನ್ನು ಉಳಿಸಿಕೊಂಡು ಬಂದಿವೆ ಹೀಗಾಗಿ ಹೆಳವರು ಅಲೆಮಾರಿಗಳೇ? ಹೌದು ಆದರೆ ಶುದ್ದಾಂಗ ಅಲೆಮಾರಿಗಳಲ್ಲ ಪಾರಂಪರಿಕ ವೃತ್ತಿಯನ್ನು ಅವಲಂಬಿಸಿರುವ ಹೆಳವರ ಉಪಪಂಗಡಗಳು ಅನೇಕ.

## ಕಥೆ - ೨

ಉತ್ತರ ಕರ್ನಾಟಕದಲ್ಲಿ ಕ್ರಿಶ ೧೫೬೦ ರಲ್ಲಿ ಬಿಜಾಪುರ ಜಿಲ್ಲೆಯ ಬಾದಾಮಿಯಲ್ಲಿ ಶ್ರೀಶಂಕರೆಪ್ಪ ಎಂಬುವರು ಮಾದಲ್ಲಗೌಡ ಎಂಬುವರಲ್ಲಿ ಜನಿಸಿದರು ಇವರು ಗೌಡ ಮನೆತನಕ್ಕೆ ಸೇರಿದ್ದು.ಕೃಷಿ ಜೀವನ ಸಾಗಿಸುತ್ತಿದ್ದರು ಮಾದಪ್ಪಗೌಡ ಎಂಬುವರಿಗೆ ಮೂರು ಜನ ಗಂಡು ಮಕ್ಕಳಿದ್ದರು ಒಂದನೇ ಮಗ ತಾಯಿಯ ಗರ್ಭದಿಂದ ಜನಿಸುವಾಗಲೇ ಕಾಲು ಇಲ್ಲದವನಾಗಿ (ಅಂಗವಿಕಲ) ಜನಿಸಿದನು ಕನ್ನಡದಲ್ಲಿ ಹೆಳವ ಎಂದರೆ ಕಾಲಿಲಲ್ಲದವನೆಂಬ ಇನ್ನೊಂದು ಅರ್ಥವಿದೆ".೧೫

**ಪುರಾಣ ಮತ್ತು ಕಥೆಗಳಿಂದ ಕೆಲವು ಸಮಾನ ಅಂಶಗಳನ್ನು ಗುರುತಿಸಬಹುದು.**

೧) ಒಂದು ಕೃಷಿಕ ಪರಂಪರೆಯ ಹಿನ್ನಲೆ ಈ ಸಮುದಾಯಕ್ಕೆ ಇದೆ.ಇವರ ಮೂಲ ಪುರುಷನೆಂದು ಹೇಳಲ್ಪಡುವ ವ್ಯಕ್ತಿಯ ಮೂಲದಲ್ಲಿ ಒಬ್ಬ ಕೃಷಿಕನ ಮಗ ಆದರೆ ಕೃಷಿ ಮಾಡಲಾಗದ ವೈಕಲ್ಯ ಆತನಿಗೆ ಪ್ರಾಪ್ತವಾಗಿದೆ.

೩) ತ್ರಿಮೂರ್ತಿಗಳಿಗೆ ತಮ್ಮ ಗೋತ್ರಗಳನ್ನು ತಿಳಿದುಕೊಳ್ಳಲು ವ್ಯಕ್ತಿಯೊಬ್ಬನ ಅವಶ್ಯಕತೆ ಇತ್ತು.ಅವರು ಬೊಂಬೆಯೊಂದನ್ನು ಮಾಡಿ ಅದಕ್ಕೆ ಜೀವ ಕೊಡುವ ಸಂದರ್ಭದಲ್ಲಿ ಆ ಬೊಂಬೆಯ ಕಾಲೂ ಊನಗೊಂಡು ಕುಂಟಾಯಿತು ಹೀಗೆ ಜೀವ

ಗುಂಪುಗಳು ವರ್ಷದ ಕೆಲ ಅವಧಿಯಲ್ಲಿ ತಮ್ಮ ಒಕ್ಕಲು ಮನೆಗಳಿಗೆ ಪಾಲು ಕೇಳಲು ಇತ್ತಿನಗಾಡಿ ಮತ್ತು ಧನ ಕರುಗಳ ಸಮೇತ ಊರು ಬಿಡುತ್ತಾರೆ.ಊರೂರು ಅಲಿಯುತ್ತಾರೆ ಇಲ್ಲೂಅವರು ತಮ್ಮ ಒಕ್ಕಲುಗಳಿಂದ ಬೇಡಿ ಪಡೆಯುವುದು ಧಾನ್ಯ ಮತ್ತು ಧನದ ಕರುಗಳನ್ನು ಮಾತ್ರ ಉತ್ತರ ಕರ್ನಾಟಕದಲ್ಲಿ ಈ ಅಲೆಮಾರಿ ಗುಂಪುಗಳು ತುಸು ಹೆಚ್ಚು ಇವೆ.ಅಲೆಮಾರಿತನ ಬೀಕ್ಷೆ ಬೇಡುವುದು ಚಿಪ್ಪೋಡಿನಲ್ಲಿಯ ಅವರು ಬರೆದ ವಂಶಾವಳಿಯೇ ಚರಿತ್ರೆಯ ನಿಜದ ಪಾಠಗಳೆಂದು ನಂಬುವುದು ಸರ್ವೆ ಸಾಮಾನ್ಯ ಅಲೆಮಾರಿತನ ಅವರಿಗೆ ಒಂದು ರೀತಿಯಲ್ಲಿ ಒಪ್ಪಿತ ಸ್ಥಿತಿ ಕುಲಕೊಂಡಾಡುವುದು ಪರಂಪರೆಯ ಕಸುಬು ಆ ಕಾರಣದಿಂದ ಈ ಗುಂಪುಗಳಿಗೆ ಅದು ಪ್ರೀಯವಾದ್ದದ್ದು ಅಲೆಮಾರಿತನ ಮತ್ತು ಬಿಕ್ಷೇ ಬೇಡುವುದು ಇವರು ತಮ್ಮ ಅಭಿವೃದ್ಧಿಗೆ ಮತ್ತು ಸ್ವಾಭಿಮಾನಕ್ಕೆ ದಕ್ಕೆ ಬರುತ್ತದೆ ಎಂದು ಭಾವಿಸಿಯೇ ಇಲ್ಲ ಅವರ ಜೊತೆ ಅಲೆಮಾರಿತನ ಬಿಟ್ಟು ಕೊಟ್ಟು ನೆಲೆನಿಲ್ಲುವ ಕುರಿತು ಚರ್ಚಿಸುತ್ತಿದ್ದಾಗ ಈ ಅಧ್ಯಯನಕಾರರನ್ನು ಈ ಅಲೆಮಾರಿ ಗುಂಪಿನವರು ಖಾರವಾಗಿ ತರಾಟಗೆ

೨) ಶಿವನ ಆಜ್ಞೆ ಮೇರೆಗೆ ಕೈಲಾಸದ ಪ್ರಥಮರು ಧರ್ಮವನ್ನು ಉಳಿಸಲು ಭೂಮಿಗೆ ಬರುತ್ತಾರೆ.ಕೈಲಾಸದಿಂದ ಬಂದ ಈ ತಂಡದಲ್ಲಿ ಒಂಟೆಕಾಲಿನ ಭೃಂಗಿಯು ಒಬ್ಬ ಈತನನ್ನು ಸೇರಿದಂತೆಎಲ್ಲರೂ ಎತ್ತುಗಳ ಮೇಲೆ ಊರೂರಿಗೆ ಶಿವನ ಕಥೆಗಳನ್ನು ಹೇಳಲಾರಂಬಿಸಿದರು ಒಂದು ಕಾಲಿನ ಭೃಂಗಿಯು ವಂಶದವರು ಹೇಳುವರು.

ತೆಗೆದುಕೊಂಡರು ಹೆಳವತನ ಪರಂಪರೆಯಿಂದ ಬಂದ ಕಾರಣಕ್ಕೆ ಅವರಿಗೆ ಅದರ ಮೇಲೆ ಭಾವೂಕವದ ಅವಲಂಬನೆ ಇದೆ. ಪುರಾಣದ ಕಥೆಗಳು ವೃತ್ತಿಯ ಮೇಲಿನ ರೂಡಿಗತ ಅವಲಂಬನೆ ಇವೆಲ್ಲ ಅವರ ಅಲೆಮಾರಿತನವನ್ನು ತೊರೆದು ನೆಲೆಸುವ ತಮ್ಮದೇ ಸಮುದಾಯದ ಜನರನ್ನು ಈ ಬಿಟ್ಟು ಅಲೆಮಾರಿಗಳು ಹೊರಗಿನವರಂತೆ ಪರಿಗಣಿಸುತ್ತಾರೆ.

ಇ ಮೇಲಿನ ಹೆಳವರ ಕುರಿತು ೧೪ ಪುರಾಣಗಳನ್ನು ಮತ್ತು ಎರಡು ಜನಪದ ಕಥೆಗಳನ್ನು ವಿಶ್ಲೇಷಿಸಿದರೆ ಹೆಳವರ ಮೂಲದ ಕುರಿತು ಕುರುಹುಗಳು ಸಿಗುತ್ತವೆ.ಈ ಎಲ್ಲ ಕಥೆಗಳಲ್ಲಿ ಹೆಳವರ ಮೂಲ ಪುರುಷ ಹುಟ್ಟುತ್ತಲೇ ಕುಂಟನಾಗಿರುವುದು ಕಂಡು ಬರುತ್ತದೆ. ಮತ್ತು ದೇವಲೋಕದ ವ್ಯಕ್ತಿಯೊಬ್ಬ ಶಾಪ ಗ್ರಸ್ತನಾಗಿ ಭೂಲೋಕಕ್ಕೆ ಬಂದು ಹರೆಳವ ವೃತ್ತಿಯನ್ನು ಆರಂಬಿಸಿದ ಸಂಗತಿ ಕೆಲವು ಕಥೆಗಳಲ್ಲಿ ವ್ಯಕ್ತವಾಗಿದೆ ಕೆಲವು ಕಥೆಗಳಲ್ಲಿ ಹೆಳವರು ವಚನಗಳ ಚಳುವಳಿಯ ನಂತರದಲ್ಲಿ ಅಸ್ತಿತ್ವಕ್ಕೆ ಬಂದರು ಎಂಬ ಸಂಗತಿ ಗೊತ್ತಾಗುತ್ತದೆ ಹೀಗಾಗಿ ಹೆಳವ ಸಮುದಾಯಕ್ಕೆ ಹೆಳವ ಎಂಬ ಹೆಸರುಯಾಕಾಗಿ ಬಂದಿತು ಎಂದು ಪ್ರಶ್ನಿಸಿಕೊಂಡರೆ ಅವರ ಸೃಷ್ಟಿ ಪುರಾಣಗಳೆ ಉತ್ತರ ನೀಡುತ್ತವೆ ಹೆಳವರಿಗೆ ವಂಶಾವಳಿಗಳನ್ನು ಹೇಳುವ ವೃತ್ತಿಯಿಂದ ಹೆಳವ ಎಂವ ಹೆಸರು ಬಂತು ಎಂಬುವುದಕ್ಕಿಂತ ಅವರ ಮೂಲಪುರುಷ ಅಂಗವಿಕಲನಾಗಿದ್ದ ಕಾರಣಕ್ಕಾಗಿ ಅವರಿಗೆ ಈ ಹೆಸರು ಬಂದಿತು ಎಂದು ತೀರ್ಮಾರ್ನಕ್ಕೆ ಬರುವುದು ಹೆಚ್ಚು ಊಕ್ತ ಎಂದು ಕಾಣುತ್ತದೆ ಹೇಳುವ ಎಂವ ಪದ ವಿರೂಪಗೊಂಡು ಹೆಳವ ಎಂಬ ಪದ ರೂಪಗೊಂಡಿತು ಎನ್ನುವುದು ತೀರಾ ಸಹಜ ತೀರ್ಮಾರ್ನದಂತೆ ಕಾಣುವುದೇ ಇಲ್ಲಶಬ್ದನಿಷ್ಪತ್ತಿಶಾಸ್ತ್ರದ ಈ ವಿವರಣೆಯ ಸ್ವತ ಹೆಳವ ಸಮುದಾಯ ಕಟ್ಟಿಕೊಂಡು ಬಂದ ಸೃಷ್ಟಿ ಪುರಾಣಗಳನ್ನೇ ಬದಿಗೆ ಸರಿಸಿ ಬಿಡುತ್ತದೆ ಮತ್ತು ಶಬ್ದನಿಷ್ಪತ್ತಿಶಾಸ್ತ್ರದ ಮೂಲಕವೇ ಒಂದು ಸಮುದಾಯದ ಹೆಸರಿನ ಮೂಲವನ್ನು ಕಂಡುಕೊಳ್ಳುವುದು ಒಂದು ಬಗೆಯಲ್ಲಿ ಬರೀ ಶೈಕ್ಷಣಿಕ ಕಸರತ್ತಿನಂತೆ ಮಾತ್ರ ಕಾಣುತ್ತದೆ ಈ ಕಾರನದಿಂದ ಅಂಗವಕಲನಾದ ವ್ಯಕ್ತಿ ಇವರ ಮೂಲಪುರುಷನಾಗಿದ್ದ ಕಾರಣಕ್ಕಾಗಿ ಈ ಸಮುದಾಯಕ್ಕೆ ಹೆಳವ ಎಂಬ ಹೆಸರು ಬಂದಿರಬೇಕು ಎಂದು ತಿರ್ಮಾಣಿಸುವುದು ಸೂಕ್ತ.



ಅಡಿ ಟಿಪ್ಪಣಿಗಳು :

೧) ಎ ಎಸ್ ಪ್ರಭಾಕರ 'ಹೆಳವರ' ಪುಟ ೧೧, ೧೨, ೧೩, ೧೪. ೨೦೧೦

೨) ಹೆಚ್ ಎಲ್ ನಾಗೇಗೌಡ 'ಹೆಳವರು & ಅವರ ಕಾವ್ಯಗಳ' ಪುಟ X ೧೯೮೫

೩) ಹರಿಲಾಲ್ ಪವಾರ್ ಹೆಳವರ ಸಂಸ್ಕೃತಿ ಪುಟ ೧೦ ೧೧ ೧೯೯೩

೪) ಎ ಎಸ್ ಪ್ರಭಾಕರ 'ಹೆಳವರ' ಪುಟ ೧೬ ರಿಂದ ೨೪ ೨೦೧೦

೫) ಎ ಎಸ್ ಪ್ರಭಾಕರ 'ಹೆಳವರು' ಪುಟ ೨೫ ರಿಂದ ೨೬ ೨೦೧೦

೬) ತೆಳಗಡಿ ಬಿ ಎಂ ಹೆಳವರು ಪು ೧೨೦ ೧೯೮೦

೭) ನಿಂಗಣ್ಣ ಸಣ್ಣಕ್ಕಿ ಹೆಳವರು ಪು ೧೯ ೧೯೮೦

೮) ರಾಜಶೇಖರ ಪಿ.ಕೆ ಹಡೆಳವರು ಪು ೨೭೨ ೧೯೮೦

೯) ಪರಮಶಿವಯ್ಯಾ ಜಿ.ಶಂ ಹೆಳವರು ಪು ೨೩೫ ೧೯೨೫

೧೦) ನಾಗೇಗೌಡ ಎಚ್ ಎಲ್ ಹೆಳವರು ಮತ್ತು ಕಾವ್ಯಗಳು ಪು ೧೯ ೧೯೮೨

# ಅಧ್ಯಾಯ ಮೂರು

## ಹೆಳವ ಸಮುದಾಯದ ಸಾಮಾಜಿಕ ರಚನೆ

೧) ಹೆಳವರ ಸಾಮಾಜಿಕ ರಚನೆ.

೨) ಹೆಳವರ ಪಂಗಡಗಳು ಮತ್ತು ಉಪ ವೃತ್ತಿಗಳು.

೩) ಹೆಳವ ಸಮುದಾಯದ ಬೆಡಗುಗಳು.

# ಅಧ್ಯಾಯ – ೩

## ಹೆಳವರ ಸಮುದಾಯದ ಸಾಮಾಜಿಕ ರಚನೆ

**ಪ್ರಸ್ತಾವಣೆ :-**

ಹೆಳವರು ಇಂದು ಅಲೆಮಾರಿಗಳನೆಲ್ಲ ಆದರೆ ಅಲೆಮಾರಿಗಳಾಗಿದ್ದವರು ಮತ್ತು ಈವತ್ತಿಗೂ ಈ ಸಮುದಾಯದ ಹಲವೂ ಗುಂಪುಗಳು ಅಲೆಮಾರಿಗಳಾಗಿ ಬದುಕುತ್ತಿದ್ದಾರೆ. ಭಾರತದ ಬಹುತೇಕ ಅಲೆಮಾರಿಗಳು ಈ ದೇಶದ ಶ್ರೇಣಿಕೃತ ವ್ಯವಸ್ಥಯ ಕಾರಣಕ್ಕಾಗಿ ರೂಪಗೊಂಡವರು. ಭಾರತದ ಸಮಾಜದಲ್ಲಿ ಇಂತಹದೇ ಕಾಲಘಟ್ಟದಲ್ಲಿ ಅಲೆಮಾರಿಗಳು ಸೃಷ್ಟಿಯಾದರು ಎಂದು ಹೇಳಲಾಗುವುದಿಲ್ಲ. ಭಾರತದ ಸಾಮಾಜಿಕ ವ್ಯವಸ್ಥೆ ಎಷ್ಟೋ ಸಂಕೀರ್ಣವೋ ಅವ್ಯವಸ್ಥೆಯ ಅಂತರ್ಗತ ಭಾಗವಾಗಿರುವ ಅಲೆಮಾರಿಗಳು ರೂಪಗೊಳ್ಳುವದಕ್ಕೆ ಕಾರಣವಾಗಿರುವ ಸಾಮಾಜಿಕ ಆರ್ಥಿಕ ಸಂಗತಿಗಳು ಸಹ ಅಷ್ಟೇ ಕಾರಣವಾಗಿದೆ.

ಭಾರತದಲ್ಲಿ ಜಾತಿಯತೆ ಶ್ರಮವಿಭಜನೆಯ ಆಧಾರದ ಮೇಲೆ ರೂಪಗೊಂಡು ಬಂದಿದೆ ಜಾತಿಯೊಂದು ತನ್ನ ಆಚರಣೆ ಲಾಂಛನ ಭಾಷೆ ಇವುಗಳ ಮೂಲಕ ಭಾವನಾತ್ಮಕವಾಗಿ ತನ್ನ ಅಸ್ತಿತ್ವವನ್ನು ಕಾಯಂಗೊಳಿಸುತ್ತಲೇ ಬಂದಿದೆ ತಾನು ಅನುಸರಿಸುವ ಕೆಲಸ ಕಾರ್ಯಗಳಿಂದ ಒಂದು ಸಾಮಾಜಿಕ ಗುಂಪು ಸ್ವಯಂ ಪೂರ್ಣವಾಗಿ ಇನ್ನೊಂದು ಜಾತಿ ಸಮುದಾಯದಿಂದ ಅನೇಕ ಬಗೆಗಳಲ್ಲಿ ಭಿನ್ನವಾಗಿ ನಿಲ್ಲುತ್ತದೆ.

**ಸಾಮಾಜಿಕ ರಚನೆ :-**

ಒಂದು ನಿರ್ಧಿಷ್ಟ ಅಲೆಮಾರಿ ಸಮುದಾಯದ ಲಕ್ಷಣಗಳೆಲ್ಲವೂ ಹೆಳವರ ಸಮಾಜದಲ್ಲಿ ಅಂತರ್ಗತವಾಗಿವೆ ಹೆಳವರು ಇಂದು ಅಲೆಮಾರಿಗಳಾಗಿ ಉಳಿದುಕೊಂಡಿಲ್ಲ. ಈ ದೇಶವು ನಡೆದು ಬಂದ ರಾಜಕೀಯ ಸಾಮಾಜಿಕವಾಗಿ ಆರ್ಥಿಕವಾಗಿ ಧಾರ್ಮಿಕವಾಗಿ ತನ್ನದೆಯಾದ ಪ್ರಭಾವಗಳನ್ನು ಇತರ ಸಮುದಾಯಗಳಂತೆ ಈ ಸಮುದಾಯವು ನಡೆದು ಬಂದು ಅನೇಕ ಬದಲಾವಣೆಗಳನ್ನು ತನ್ನ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡಿದೆ. ನಿರ್ಧಿಷ್ಟವಾಗಿ ಹೆಳವ ಸಮುದಾಯಕ್ಕೆ ಆರ್ಥಿಕ ಮೂಲಗಳು ಇಲ್ಲದಿದ್ದರೂ ಚಾರಿತ್ರಿಕವಾಗಿ ಊಳಿಗಮಾನ್ಯ ವ್ಯವಸ್ಥೆಯನ್ನು ಅವಲಂಬಿಸಿ ಬದುಕಿನ ಪಯಣವನ್ನು ಆರಂಬಿಸಿದೆ. ಹೆಳವರು ಬದುಕಿನ ಕಾರಣಕ್ಕಾಗಿ ಈ ಸಮಾಜದಲ್ಲೂ ಉಳಿಗಮಾನ್ಯ ಮೌಲ್ಯಗಳು ಸಹಜವಾಗಿ ಬೆರತಿವೆ.ಕಾರಣ ಇದು ಪುರುಷ ಪ್ರಧಾನ ಸಮಾಜ ,ಪುರುಷ ಕುಟುಂಬದ ಒಟ್ಟಾರೆ ನಿರ್ಣಯಗಳ ಕೇಂದ್ರ ಬಿಂದು ಜಾತಿ ನಿಯಮಗಳನ್ನು ಹೆಳವ ಸಮಾಜ ಕಟ್ಟು ನಿಟ್ಟಾಗಿ ಅನುಸರಿಸಿಕೊಂಡು ಬಂದಿದೆ. ಇಂದಿಗೂ ಜಾತಿ ಪಂಚಾಯ್ತಿಗಳು ನ್ಯಾಯ ನಿರ್ಣಯಗಳ ಸಂದರ್ಭದಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಜಾತಿ ಪಂಚಾಯ್ತಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಪೂಜಾ ವಿಧಾನ ಸಂಪ್ರದಾಯ

,ವಿವಾಹ ಪದ್ಧತಿಗಳನ್ನು ಹೆಳವ ಸಮಾಜವು ಕಟ್ಟಿ ನಿಟ್ಟಾಗಿ ಅನುಸರಿಸಿಕೊಂಡು, ಉಳಿಸಿಕೊಂಡು ಬಂದಿರುವುದು ಸ್ಪಷ್ಟವಾಗಿ ಕಾಣುತ್ತದೆ.

ಭಾರತದ ಎಲ್ಲ ಅಲೆಮಾರಿ ಸಮುದಾಯಗಳ ಸಾಮಾಜಿಕ ವ್ಯವಸ್ಥೆಯಂತೆಯೇ ಹೆಳವರು ಸಹ ಒಂದು ವಿಘಟಿತ ಸಮಾಜವಾಗಿದೆ. ಈ ಬಗೆಯ ವಿಘಟನೆಗೆ ಸಮುದಾಯಗಳ ಅಲೆಮಾರಿತನ ಮತ್ತು ಅಧಿಕಾರರಹಿತ ಸ್ಥಿತಿಗತಿಗಳು ಕಾರಣವಾಗುತ್ತವೆ. ಯಾವ ಸಮುದಾಯಗಳಿಗೆ ಆರ್ಥಿಕ ರಂಗದಲ್ಲಿ ಪಾರಂಪರಿಕವಾಗಿ ಹಕ್ಕುಗಳು ಪ್ರಾಪ್ತವಾಗಿರುವದಿಲ್ಲವೋ ಯಾವ ಸಮುದಾಯಗಳು ಈ ದೇಶದ ಹಿನಾಯ ಶೋಷನೆಗೆ ಒಳಗಾಗಿ ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಪರಾವಲಂಬಿಗಳಾಗಿ ಬದುಕಿ ಬಂದಿರುವವೋ ಆ ಎಲ್ಲಾ ಸಮಾಜಗಳು ಒಂದರ್ಥದಲ್ಲಿ ವಿಘಟಿತಗೊಂಡಿವೆ. ಒಂದು ರೀತಿಯಲ್ಲಿ ಭಗ್ನಗೊಂಡಿವೆ. ಈ ಭಗ್ನತೆಯೂ ಸಮುದಾಯದ ಚಿತ್ರಗಳನ್ನು ನಾಶ ಮಾಡುವಂತಹದಲ್ಲ. ಆದರೆ ಸಾಮಾಜಿಕ ಅಧಿಕಾರಗಳಿಲ್ಲದ ಸಮುದಾಯಗಳು ಸಹಜವಾಗಿಯೇ ಭಗ್ನಗೊಂಡು ವಿಂಗಡನೆಯಾಗಿವೆ. ಇದಕ್ಕೆ ಹೆಳವ ಸಮಾಜದಲ್ಲಿಯ ಅನೇಕ ಉಪಪಂಗಡಗಳೇ ಸಾಕ್ಷಿ ಜೊತೆಗೆ ಇವತ್ತಿನ ಉಪಪಂಗಡಗಳಲ್ಲಿ ಬದುಕುತ್ತಿರುವ ಸಮುದಾಯದ ಜನ ವರ್ತಮಾನದ ಕುರಿತು ಚಿಂತಿಸಿರುವದನ್ನು ಗಮನಿಸಿದರೆ, ಒಂದೇ ಸಮುದಾಯದ ಒಳಗಿರುವ ಅನೇಕ ಅಭಿಪ್ರಾಯ ಬೇಧಗಳು ಮತ್ತು ಸಮಾಜದ ಚಹರೆಗಳು ಕುರಿತು ಅವರಿಗಿರುವ ಗ್ರಹಿಕೆಗಳು ಸ್ಪಷ್ಟವಾಗುತ್ತವೆ.

ಭಾರತದಲ್ಲಿ ಅಲೆಮಾರಿಗಳನ್ನು ವಿಶೇಷ ಅಧ್ಯಯನ ಮಾಡಿದ ಪಿ.ಕೆ ಮಿಶ್ರ ಅಲೆಮಾರಿಗಳನ್ನು ವಿಶೇಷವಾಗಿ ಪಾರಂಪರಿಕ ಪ್ರತಿನಿಧಿಗಳೆಂದು ಕರೆಯುತ್ತಾರೆ. ಹಿಂದೂ ಸಮಾಜದ ಪಳೆಯುಳಿಕೆಗಳನ್ನು ರಕ್ಷಿಸಿಕೊಂಡು ಬರುತ್ತಿರುವುದು ಅಲೆಮಾರಿಗಳೆಂದು ಪರಿಗಣಿಸಲಾಗುತ್ತದೆ.

ಮೊದಲೇ ಹೇಳಿದಂತೆ ಅಲೆಮಾರಿಗಳು ಒಂದು ವಿಘಟಿತ ಸಮಾಜ ಒಂದು ಕಾಲಘಟ್ಟದಲ್ಲಿ ಹೆಳವ ಸಮುದಾಯವು ಏಕಸ್ವರೂಪಿಯಾಗಿರದ್ದಿರಬಹುದು ಆದರೆ ಕಾಲಾನಂತರದಲ್ಲಿ ತಮ್ಮ ಅಲೆಮಾರಿತನದಿಂದ ಮತ್ತು ಭಿನ್ನ ಸಾಮಾಜಿಕಾರ್ಥಿಕ ಪ್ರಾಭಾವಗಳಿಂದ ಮತ್ತೇ ಹಲವು ಸಂದರ್ಭಗಳಲ್ಲಿ ಅನಿವಾರ್ಯತೆಯ ಕಾರಣಗಳಿಂದ ಹೆಳವರಲಲಿ ಅನೇಕ ಪಂಗಡಗಳು ರೂಪಗೊಂಡಿರುವುದನ್ನು ಕಾಣಬಹುದಾಗಿದೆ.

## ಹೆಳವರ ಪಂಗಡಗಳು ಮತ್ತು ಉಪವೃತ್ತಿ :-

"ಹೆಳವರು ಮೂಲತಃ ಒಂದೇ ಬುಡಕಟ್ಟಿನವರಾಗಿದ್ದು ಕಾಲಾಂತರದಲ್ಲಿ ಇವರುಗಳು ಯತಮ್ಮ ಜೀವನೋಪಾಯಕ್ಕಾಗಿ ವಿವಿದ ವೃತ್ತಿಗಳನ್ನು ಕೈಗೊಂಡರೆಂದು ತೋರುತ್ತದೆ ಕಾಲಕ್ರಮೇಣ ವೃತ್ತಿಯು ಮುಂದುವರೆಯುತ್ತಾ ಬಂದಂತೆ ವಿವಿಧ ಪಂಗಡಗಳುಹುಟ್ಟಿಕೊಂಡವು ಹೆಳವರಲ್ಲಿ ಪ್ರಮೂಖವಾಗಿ ಮೂರು ಪಂಗಡಗಳನ್ನು ಗುರುತಿಸಬಹುದು ಉದಾ ;- ಎತ್ತಿನ ಹೆಳವರು

ಗಂಟೆ ಹೆಳವರು ಮತ್ತು ಚಾಪೆ ಹೆಳವರು ಈ ಮೂರು ಪಂಗಡಗಳಲ್ಲಿಯೇ ಮತ್ತೆ ಕೆಲವು ಉಪಪಂಗಡಗಳನ್ನು ಹೀಗೆ ಗುರುತಿಸಲಾಗಿದೆ ಉದಾ :– ಹಂದಿ ಹೆಳವರು, ದೂಡಿ ಹೆಳವರು, ತಿತ್ತಿ ಹೆಳವರು, ಕೊಂಕಣಿ ಹೆಳವರು, ಮಂದಲ ಹೆಳವರು, ಸಾಡು ಹೆಳವರು, ಜಾತಿ ಹೆಳವರು, ತಂಬೂರಿ ಹೆಳವರು, ಇಲ್ಲಿ ಒಂದೊಂದು ಪಂಗಡಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳಲಾಗಿದೆ.

ಪ್ರಮುಖ ಪಂಗಡಗಳು :

ಎತ್ತಿನ ಹೆಳವರು :

ಇವರು ಉತ್ತರ ಕರ್ನಾಟಕದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣ ಸಿಗುತ್ತಾರೆ ಬೆಳಗಿನ ಜಾವ ಒಕ್ಕಲು ಮನೆಗಳಿಗೆ ಹೋಗಿ ಕುಲ ಕೊಂಡಾವುದೇ ಇವರ ಪ್ರಮುಖ ವೃತ್ತಿ ವೃತ್ತಿಯ ಎತ್ತಿನ ಮೇಲೆ ಕುಳಿತು ಬಲಗಾಲು ಇತರರಿಗೆ ಕಾಣದಂತೆ ಕಂಬಳಿಯಲ್ಲಿ ಮರೆ ಮಾಡಿರುತ್ತಾರೆ. ಹೀಗೆ ಮಾಡುವುದರ ಉದ್ದೇಶ ಈ ತಾವೂ ಹೆಳವ ಎಂಬುದರ ಸಂಕೇತ.

ಗಂಟೆ ಹೆಳವರು :–

ದಕ್ಷಿಣ ಕರ್ನಾಟಕದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣ ಸಿಗುತ್ತಾರೆ.ಇವರ ಕೈಯಲ್ಲಿ ತೆಂಗಿನ ಕಾಯಿ ಗಾತ್ರದ ಗಂಟೆ ಇರುತ್ತದೆ.ಇವರು ಒಕ್ಕಲು ಮನೆಗಳ ಮುಂದೆ ಕುಲ ಕೊಂಡಾಡುವಾಗ ಲಯಕ್ಕೆನುಗುಣವಾಗಿ ಗಂಟೆಯನ್ನು ಬಾರಿಸುತ್ತಾ ಕುಲ ಕೊಂಡಾಡುತ್ತಾರೆ ಗಂಟೆಯು ಶಿವನು ತಮಗೆ ಕರುಣಿಸಿದ ಶಿವಧ್ಯಾನದ ಗಂಟೆ ಎಂದು ಹೇಳುತ್ತಾರೆ.

ಚಾಪೆ ಹೆಳವರು :

ಹೆಸರೆ ಸೂಚಿಸುವಂತೆ ಇವರು ಚಾಪೆ ಹೆಣೆಯುವ ವೃತ್ತಿ ಮಾಡುತ್ತಾರೆ ಚಾಪೆಗಳನ್ನು ಪೇಟೆಗಳಲ್ಲಿ ಮಾರಿ ಜೀವನ ಸಾಗಿಸುತ್ತಾರೆ ಬೀದರ ಗುಲ್ಬುರ್ಗಾ ರಾಯಚೂರು ಬಳ್ಳಾರಿ ಶಿವಮೊಗ್ಗ ಕಡೆಗಳಲ್ಲಿದ್ದಾರೆ ಮೊದಲು ಒಕ್ಕಲು ಮನೆಗಳಿಗೆ ಹೋಗುತ್ತಿದ್ದರಂತೆ ಆದರೆ ಇಂದು ಚಾಪೆ ಹೆಣೆಯುವ ವೃತ್ತಿ ಆರಂಭಿಸಿರುವುದರಿಂದ ಒಕ್ಕಲು ಮನೆಗಳಿಗೆ ಹೋಗುವುದನ್ನು ಬಿಟ್ಟಿದ್ದೇವೆ. ಎನ್ನುತ್ತಾರೆ ಈ ಪಂಗಡದಲ್ಲಿ ಕೆಲವರು ಹಂದಿಯನ್ನು ಸಾಕುತ್ತಾರೆ.

ಡಾ॥ ಜೀ ಶಂ ಪರಮಶಿವಯ್ಯಾನವರು ಚಾಪೆ ಹೆಳವರನ್ನು ಕುರಿತು ಹೀಗೆ ಹೇಳಿದ್ದಾರೆ ಹೆಳವರಲ್ಲಿ ಚಾಪೆ ಹೆಳವರು ಎಂಬ ಒಂದು ವಿಶಿಷ್ಠ ವರ್ಗವಿದೆ ಎಂದು ತಿಳಿದು ಬರುತ್ತದೆ ಊರ ಹೆಳವರು ಇವರೂ ಒಂದೆ ಎಂಬುದರ ಬಗ್ಗೆ ನಿಖರವಾಗಿ ಹೇಳಲು ಸಾದ್ಯವಾಗಿಲ್ಲ.

ಚಾಪೆ ಹೆಳವರು ಇತರ ಇತರ ಒಂದೇ ಮೂಲದವರು ಆಗಿದ್ದಾರೆ.ಎಂಬುವುದಕ್ಕೆ ಈ ಸಂಕಲನದಲ್ಲಿ ಪ್ರಕಟವಾಗಿರುವ ಹೆಳವೇ ಗೌಡ ಕುಲ ಪುರಾಣ ಬೆಳಕು ಚೆಲ್ಲುತ್ತದೆ ಈಚಲು ಚಾಪೆಯ ಚಿಲುವೊಂದನ್ನು ಬೆನ್ನಿಗೆ ಕಟ್ಟಿಕೊಂಡು ಕೈಯಲ್ಲಿ ಗಂಟೆ ಹಿಡಿದು ಮೇಲೆ ಕೆಳಗೆ ಆಡಿಸುತ್ತಾ ವರ್ಷಕ್ಕೊಮ್ಮೆ ಇವರು ರೈತರ ಮನೆಯ ಬಾಗಿಲಲ್ಲಿ ಕಾಣಿಸಿಕೊಳ್ಳುತ್ತಾರೆ ಎನ್ನಲಾಗಿದೆ ಈ ಎರಡು ವರ್ಗದವರು ಒಂದೇ ಮೂಲದವರೋ ಬೇರೆ ಬೇರೆ ಬುಡಕಟ್ಟಿನವರೋ

ಎಂಬುವದರ ಬಗ್ಗೆ ಅಧ್ಯಯನ ನಡೆಯಬೇಕಾಗಿದೆ.

**ಉಪ ಪಂಗಡಗಳು :**

ಹಂದಿ ಹೆಳವರು : ಬೀದರ ಗುಲ್ಬುರ್ಗಾ ಬಳ್ಳಾರಿ ಮುಂತಾದ ಕಡೆಗಳಲ್ಲಿ ಕಾಣಸಿಗುತ್ತಾರೆ ಹಂದಿ ಸಾಕುವುದೇ ಇವರ ಪ್ರಮುಖ ವೃತ್ತಿ ಹಂದಿಗಳನ್ನು ಸಾಕಿಕೊಂಡು ಅವುಗಳ ಗೊಬ್ಬರ ರೈತರಿಗೆ ಮಾರುತ್ತಾರೆ.

**ದೂದಿ ಹೆಳವರು :**

ದೂದಿ (ಅಳ್ಳಿ)ಯನ್ನು ತಯಾರಿಸಿ ಪೇಟೆಗಳಲ್ಲಿ ಮಾರಿ ಹಣ ಸಂಪಾದಿಸುತ್ತಾರೆ ಇವರ ಹೆಣ್ಣು ಮಕ್ಕಳು ಮನೆಗಳಲ್ಲಿ ಈಚಲು ಗರಿಗಳಿಂದ ಚಾಪೆಗಳನ್ನು ತಯಾರಿಸಿ ಮಾರುತ್ತಾರೆ ಬೀದರ ಗುಲ್ಬುರ್ಗಾ ಬಸವಕಲ್ಯಾಣ ಮತ್ತಿತ್ತರ ಕಡೆಗಳಲ್ಲಿ ವಾಸಿಸುತ್ತಿದ್ದಾರೆ ಇವರಲ್ಲಿಯೂ ಕೆಲವರು ಹಂದುಯನ್ನು ಸಾಕುವುದುಂಟು

**ತಿತ್ತಿ ಹೆಳವರು :**

ಹೆಳವ ತನ್ನ ತೊಗಲು ತಿತ್ತಿತ ವಾದ್ಯದ ಶ್ರುತಿಯಲ್ಲಿ ತನ್ನ ಕಂಠಶ್ರುತಿಯನ್ನು ಲೀನಮಾಡಿ ಕಥೆ ಹೇಳುವ ರೀತಿಯ ಶೈಲಿ ಸೋಗಸಾದದು ಆತನ ಶೃತಿ ಜ್ಞಾನವು ದೊಡ್ಡ ಸಂಗೀತ ವಿದ್ವಾಂಸರಿಗೂ ಕಠಿಣವಾದದ್ದು ನಮ್ಮ ದೇಶಕ್ಕೆ ಹಾರ್ಮೋನಿಯಂ ಬಾರದ ಮುಂಚೆ ಸಂಗೀತಕ್ಕೆ ಈ ತೊಗಲು ತಿತ್ತಿ ಮತ್ತು ಸೋರೆಕಾಯಿ ಶೃತಿ ಉಪಯೋಗಿಸುತ್ತಿದ್ದರು.

**ಪುಂಗಿ ಹೆಳವರು :**

ಸಂಗೀತ ಪಂಡಿತರ ಮಂಡಳಿಯಲ್ಲಿ ತಂಬೂರಿ ಶೃತಿ ಪ್ರಾಚೀನ ಕಾಲದಿಂದಲೂ ಇತ್ತು. ಈ ಉಪಂಗವಾದ್ಯದಲ್ಲಿ ಹವೆಯನ್ನು ತುಂಬಿ ಬಗಲಲ್ಲಿ ಹಾಕಿ ಒತ್ತಿದ್ದಾಗ ಹಾವಾಡಿಗರು ಒದುವ ಪುಂಗಿಯ ನಾದದಂತೆ ಶೃತಿಯು ಹೊರಡುತ್ತದೆ.ಆದುದ್ದರಿಂದ ಇವರಿಗೆ ಪುಂಗಿಯ ಹೆಳವರು ಇವರು ಬಳ್ಳಾರಿ ರಾಯಚುರು ಗುಂದಕಲ್ಲ ಮತ್ತು ಅನಂತಪೂರ ದಢೆಕಲ್ಲಗಳಲ್ಲಿ ಇದ್ದಾರೆ.

**ಕೂಕಣಿ ಹೆಳವರು :-**

ಕಿವಿಯಲ್ಲಿಯ ಕೂಕಣಿ (ಗುಗ್ಗೆ) ತೆಗೆಯುವುದು ಇವರ ಪ್ರಮುಖ ವೃತ್ತಿ ಇವರ ಹೆಣ್ಣು ಮಕ್ಕಲು ಕಸಬರಿಗೆ ಚಾಪೆ ತಯಾರಿಸಿ ಮಾರುತ್ತಾರೆ ಮತ್ತೆ ಕೆಲವರು ಕೂದಲು ತುಂಬುತ್ತಾರೆ. ರಾಯಚೂರು ಬಳ್ಳಾರಿ ಕೊಟ್ಟೂರು ಕೊಡ್ಲಗಿ ಕಡೆಗಳಲ್ಲಿ ಇದ್ದಾರೆ ಇವರಿಗೆ ಇಕ್ಕಲು ಮನೆಗಳಿಗೆ ಹೋಗುವುದು ಗೋತ್ತಿಲ್ಲ

**ಮಂದಲ ಹೆಳವರು:-**

ಮರ್ದು ಅಥವಾ ಮದ್ದು ವಿನಿಂದ ಮಂದಲ ಶಬ್ದ ಬಂದಿದೆ ಹೆಳವರ ಮನೆ ಮಾತು ತೆಲುಗಿನಲ್ಲಿ ಮಂದಲ ಎಂದರೆ ಔಷದ ಎಂದರ್ಥ ಗಿಡ ಮೂಲಿಕೆ ಔಷದಿ ಕೊಡುವುದರಲ್ಲಿ ಇವರು ನಿಪೂಣರು ಇವರ ಹೆಣ್ಣು ಮಕ್ಕಳು ಮನೆಯಲ್ಲಿ ಔಷದಿಯನ್ನು ತಯಾರಿಸುತ್ತಾರೆ ಗಂಡಸರು ಪೇಟೆಗಳಲ್ಲಿ ಸುತ್ತಾಡಿ ಔಷದಿ ಮಾರುತ್ತಾರೆ ಮೈಸೂರು ಬೆಂಗಳೂರು ಕೋಲಾರ ಬಳ್ಳಾರಿ ಮತ್ತಿತ್ತರ ಕಡೆಗಳಲ್ಲಿ ಕಾಣಸಿಗುತ್ತಾರೆ ಮೈಸೂರಿನ ಸಮೀಪದಲ್ಲಿರುವ ಹೆಳವರ ಹುಂಡಿಯ ಗಂಟೆ ಹೆಳವರು ಹೆಚ್ಚಿನ ಸಂಖ್ಯೆಯಲ್ಲಿ ಈ ವೃತ್ತಿ ಕೈಗೊಂಡಿರುತ್ತಾರೆ.

ಕಂಬಿ ಹೆಳವರು:

ಕಂಬಿ ಹೊತ್ತುಕೊಂಡು ಒಕ್ಕಲು ಮನೆಗಳಿಗೆ ಹೋಗುತ್ತಾರೆ ಇವರು ಶಾಖಾಹಾರಿಗಳು ಹಗಲಿನ ಮೇಲೆ ಬಿದರಿನ ಕಟ್ಟಿಗೆಯ ಹಿಂಬದಿಗೆ ಮತ್ತು ಮುಂಬದಿಗೆ ಇಳಿ ಬಿಟ್ಟ ಚಾಪೆ ಚಿಲುಗಳಿರುತ್ತವೆ ಬಲಗೈಯಲ್ಲಿ ಗಂಟೆ ಹಿಡಿದುಕೊಂಡು ಒಕ್ಕಲು ಮನೆಗಳಿಗೆ ಬರುತ್ತಾರೆ ಕುಲ ವೃತ್ತಾಂತ ಹೇಳುತ್ತಾರೆ.

ಅಡವಿ ಹೆಳವರು:-

ಗುಲ್ಬುರ್ಗಾ ಜಿಲ್ಲೆಯ ಸುರಪುರ ತಾಲೂಕು ಕಕೇರಿಯ ಅಡವಿಯಲ್ಲಿ ಅಡವಿ ಹೆಳವರು ಎಂಬ ಒಂದು ಜನ ಸಮುದಾಯವಿದೆ ಇವರು ಅಡವಿಯಲ್ಲಿಯೇ ತಮ್ಮ ಗುಡಿಸಲುಗಳನ್ನು ಹಾಕಿಕೊಂಡು ಇರುತ್ತಾರೆಎ ಈಚಲುಗಳಿಂದ ಚಾಪೆ ಹೆಣೆಯುತ್ತಾರೆ ಹೂಲಿ ಕಟ್ಟಿಗೆ ಈಚಲಿನ ನವಿರಾದ ಬಿಲಿಲುಗಳಿಂದ ಬುಟ್ಟಿ ತಯಾರಿಸಿ ಮಾರುತ್ತಾರೆ ಅಡವಿಯಲ್ಲಿ ಸಿಗುವ ಮೊಲಕ ವೂಜಗ ಬುರಲಿ ಪಾರಿವಾಳ ಇತ್ಯಾದಿಗಳನ್ನು ಪೇಟೆಗಳಲ್ಲಿ ಮಾರಿ ಹಣ ಸಂಪಾದಿಸುತ್ತಾರೆ.

ಊರ ಹೆಳವರು :

ಈ ಹೆಸರು ಉತ್ತರ ಕರ್ನಾಟಕದ ಎತ್ತಿನ ಹೆಳವರಿಗೆ ಅನ್ವಯಿಸುಬಹುದೇ? ಇವರು ತಮ್ಮ ಪ್ರತೇಕ ಹಟ್ಟಿಗಳನ್ನು ಮಾಡದೇ ಊರ ಜನರ ಮಧ್ಯ ಕೊಡಿರುವುದರಿಂದ ಈ ಹೆಸರು ಬಂದಿರಬೇಕು ಇವರು ಒಕ್ಕಲುಮನೆಗಳಿಗೆ ಹೋಗುತ್ತಾರೆ ಬೇಸಾಯವನ್ನು ಮಾಡುತ್ತಾರೆ ಎತ್ತಿನ ಹೆಳವರೂ ನಾವೂ ಅಣ್ಣ ತಮ್ಮಂದಿರರೆಂದು ಹೇಳುತ್ತಾರೆ.

ಸಾದು ಹೆಳವರು :-

ಈ ಪಂಗಡದವರನ್ನು ಕುರಿತು ನಾಗೇಗೌಡರು ಹೀಗೆ ಹೇಳಿದ್ದಾರೆ ಇವರು ಸಾದುಗೌಡರಿಗೆ ಅಂದರೆ ಸಾದು ಲಿಂಗಾಯ್ತರಿಗೆ ಹೇಳುತ್ತಾರೆ ಸಾಮಾನ್ಯವಾಗಿ ಲಿಂಗಾಯ್ತರಲ್ಲಿ ಸಾದು ಲಿಂಗಾಯ್ತರೇ ಜಿರಾಯ್ತು ಮಾಡುವ ಜನ ಇವರನ್ನು ಒಕ್ಕಲಿಗರೆಂದು ಕರೆಯುವುದುಂಟು ಇವರು ಚಿತ್ರದುರ್ಗ ಜಿಲ್ಲೆಯ ಕೆಲವು ಭಾಗಗಳಲ್ಲಿ ಕಾಣ ಸಿಗುತ್ತಾರೆ ಈ ಗುಂಪಿನವರು
ತಾವೂ ಹೆಳವರೆಂದು ಹೇಳಿಕೊಳ್ಳಲು ಹಿಂಜರಿಯುತ್ತಾರೆ.

## ಜಾತಿ ಹೆಳವರು:-

ಇವರನ್ನು ಕುರಿತು ನಾಗೇಗೌಡರು ಜಾತ ಹೆಳವರು ಎಂಬ ವಿಶಿಷ್ಟವರ್ಗವಿದೆಯಂದು ತಿಳಿದು ಬರುತ್ತದೆ. ಇವರೂ ಊರ ಹೆಳವರು ಒಂದೇ ಇರಬಹುದೆಂದೂ ತಿಳಿದು ಬರುತ್ತದೆ ಇವರು ಊರ ಹೆಳವರೂ ಒಂದೇ ಇರಬಹುದೇ? ಎಂದು ಸಂಶಯ ತೋರಿದ್ದಾರೆ.ಆದರೆ ಈ ಪಂಗಡ ಜನರು ಕ್ಷೇತ್ರ ಕಾರ್ಯದ ಅವಧಿಯಲ್ಲಿ ಏಲ್ಲಯೂ ಕಂಡು ಬಂದಿಲ್ಲ ಹೆಳವರನ್ನು ವಿಚಾರಿಸಿದಾಗ ತಮಗೂ ಗೋತ್ತಿಲ್ಲ ಎಂದು ಹೇಳುತ್ತಾರೆ ಈ ಪಂಗಡದವರು ಇದ್ದಾರೋ ಇಲ್ಲವೋ ಎಂಬುದರ ಬಗ್ಗೆ ಖಚಿತವಾಗಿ ಹೇಳಲು ಬರುವುದಿಲ್ಲ.

## ತಂಬೂರಿ ಹೆಳವರು :-

ಈ ಪಂಗಡದವರು ಆಂದ್ರ ಪ್ರದೇಶದಲ್ಲಿದ್ದಾರೆ.ಇವರೂ ಮೂರ್‍ನಾಲ್ಕು ಜನ ಕೊಡಿಕೊಂಡು ರೆಡ್ಡಿ ಮನೆತನಗಳ ಮುಂದೆ ಹೋಗಿ ತಂಬೂರಿ ಬಾರಿಸಿ ಕುಲ ವೃತ್ತಾಂತ ಹೇಳುತ್ತಾರೆ ಮೊದಲಿಗ ಇಬ್ಬರೂ ಹಾಡುತ್ತಾರೆ ಆಮೇಲೆ ಉಳಿದವರು ದ್ವನಿಗೂಡಿಸುತ್ತಾರೆ ಕೆಲವು ಪೇಟೆಗಳಲ್ಲಿ ಸುತ್ತಾಡಿ ಶ್ರೀಶೈಲ ಮಲ್ಲಿಕಾರ್ಜುನ ಸಾಸುರ ಚಿನ್ನಮ್ಮ ಮುಂತಾದ ದೇವತೆಗಳ ಮೇಲೆ ಹಾಡಿ ಹಣ ಸಂಗ್ರಹಿಸುತ್ತಾರೆ.

ಹೆಳವರ ವಿವಿಧ ಪಂಗಡಗಳನ್ನು ಗಮನಿಸಿದಾಗ ನಮಗೆ ತಿಳಿದು ಬರುವ ಸಂಗತಿ ಮೂಲದಲ್ಲಿ ಈ ಗುಂಪಿನವರು ಒಂದೇ ಬುಡಕಟ್ಟಿಗೆ ಸೇರಿದ್ದು ಕಾಲಾಂತರದಲ್ಲಿ ತಮ್ಮ ಜೀವನೋಪಾಯಕ್ಕಾಗಿ ವಿವಿಧ ವೃತ್ತಿಗಳನ್ನು ಕೈಗೊಂಡರೆಂದು ತೋರುತ್ತದೆ ಆದರೆವಿ ಇದು ಯಾವಾಗ ಈ ವೃತ್ತಿ ಕೈಗೊಂಡರೆಂದು ನಿರ್ಧಿಷ್ಟವಾಗಿ ಹೇಳಲು ಬರುವುದಿಲ್ಲ

## ೪) ಹೆಳವ ಸಮುದಾಯದ ಬೆಡಗುಗಳು:-

ಹೆಳವರು ಬೆಡಗುಗಳಿಗೆ ಕಾಲ ಗೋತ್ರ ಬಳಿ ಎಂದು ಕರೆಯುವುದುಂಟು ಹೆಳವರೆಲ್ಲ ವಿವಿಧ ಒಳಪಂಗಡಗಳಿವೆ ಉದಾ: ಎತ್ತಿನ ಹೆಳವರು ಗಂಟೆ ಹೆಳವರು ಹಂದಿ ಹೆ:ಳವರು ಇತ್ಯಾದಿ ಮದುವೆ ಮುಂತಾದ ಮಹತ್ ಕಾರ್ಯಮಾಡಬೇಕಾದರೆ ಬೆಡಗುಗಳ ಆಧಾರದ ಮೇಲೆ ಮಾಡುತ್ತಾರೆ ಒಳ ಪಂಗಡಗಳು ಉಪವೃತ್ತಿ ಕಾರಣದಿಂದಾಗಿ ಬಂದವೂಗಳು ಹೆಳವರೂ ಮೂಲದಲ್ಲಿ ಒಂದೇ ಬುಡಕಟ್ಟಿನಿಂದ ಬಂದವರು ಕುಲದೇವತಾ ಪದ್ದತಿ ಉಳ್ಳವರು ಉದಾ : ಅರಳಿಕುಲ ಅವರಿಕುಲ ಹೂವು ಕುಲ ಆನೆಕುಲ ಇತ್ಯಾದಿ

ಹೆಳವರಲ್ಲಿ ಪ್ರಚಲಿತದಿರುವ ಕುಲಗೋತ್ರಗಳಿಗೆ ಒಂದೊಂದು ಪ್ರಣಿ ಪಶು ಪಕ್ಷಿ ಗಿಡಮರ ಹೂ ಬಳ್ಳಿ ವ್ಯಕ್ತಿ ದೇವರು ಮುಂತಾದವುಗಳ ಹೆಸರಿರುವುದು ಕಂಡು ಬರುತ್ತದೆ ಇವುಗಳಲ್ಲಿ ಒಂದರ ಜೊತೆಗೆ ವಿಶೇಷ ಸಂಬಂಧ ಇಟ್ಟುಕೊಂಡು ಆ ಕುಲಕ್ಕೆ ಸೇರಿದವರೆಲ್ಲ ರೂ ತಮ್ಮ ಮೂಲವನ್ನು ಅದರಿಂದಲೇ ಗುರುತಿಸುತ್ತಾರೆ ಹೆಳವರಲ್ಲಿ ಈ ಕೆಳಕಂಡ ಬೆಡಗುಗಳು ಕಂಡು

ಬರುತ್ತವೆ.

೧) ಅಡಕಿಲವರು
೨) ಅಂಧಕಲವರು
೩) ಅವರಿಲವರು
೪) ಅರಳಿಲವರು
೫) ಅಜ್ಜೆಲವರು
೬) ಆನೆಲವರು
೭) ಆರೆಲವರು
೮) ಆವಿನವರು
೯) ಇಮ್ಮಡಿಲವರು
೧೦) ಇರಲವರು
೧೧) ಉರಸನ್ನವರು
೧೨) ಉದಿಲವರು
೧೩) ಎಮ್ಮೆಲವರು
೧೪) ಎಕ್ಕೆಲುವರು
೧೫) ಒನಿಕೆಲವರು
೧೬) ಓರಲವರು
೧೭) ಔಡಲವರು
೧೮) ಕಡಗದವರು
೧೯) ಕಡ್ಡೇಲವರು
೨೦) ಕಡಹಟ್ಟಿಲವರು
೨೧) ಕಂಬಳಿಲವರು
೨೨) ಕಸ್ತೂರಿಲವರು
೨೩) ಕಾಮಲವರು
೨೪) ಕುರಿಹಾಲಿನವರು
೨೫) ಕುಂಟಿಲವರು
೨೬) ಕೆಂಗುರಿಲವರು
೨೭) ಕೋರಿಲವರು
೨೮) ಗಡ್ಡಲವರು
೨೯) ಗಾಲೇನವರು
೩೦) ಗೀಜಗನವರು
೩೧) ಗೋಪಾಲನವರು
೬೩) ಬಳೆಗಾದವರು
೬೪) ಬಾಗಲದವರು
೬೫) ಬಾಳೆಲದವರು
೬೬) ಬಾಚಿಲದವರು
೬೭) ಬ್ಯಾಲನವರು
೬೮) ಬಿಳಿಗುರಿಲವರು

೩೨) ಗೌಡಲವರು
೩೩) ಚಿಪ್ಪಡಲವರು
೩೪) ಚಿಟಿಮಲ್ಲನವರು
೩೫) ಚಿನ್ನಿಲವರು
೩೬) ಚಿನ್ನಿಕೋರಿಲವರು
೩೭) ಜಂಗಮಲ್ಲರು
೩೮) ಜಂಗಿನವರು
೩೯) ಜುಂಜಲವರು
೪೦) ಜ್ಯೋತಿಲವರು
೪೧) ಟಂಕಲದವರು
೪೨) ತುಪ್ಪದವರು
೪೩) ತುರಬಿನವರು
೪೪) ತೆಲಗಾಬತ್ತಲರು
೪೫) ದರ್ಶನಲವರು
೪೬) ದನೇಲರು
೪೭) ದಾಸರಿಲವರು
೪೮) ದಿಬ್ಬಕುಲದವರು
೪೯) ದೇವಾಲವರು
೫೦) ನಡೆ(ಹಟ್ಟಿ) ವಟ್ಟಿಲವರು
೫೧) ನೆರಲವರು
೫೨) ಪಳಸಿದವರು
೫೩) ಪರ್ವಲವರು
೫೪) ಪತ್ರೆಯವರು
೫೫) ಪುರಾತನದವರು
೫೬) ಪೆಟ್ಟಿಗೆಲದವರು
೫೭) ಬಂಡಿಲವರು
೫೮) ಬಸರಿಲವರು
೫೯) ಬಂಗಾರದವರು
೬೦) ಬಣ್ಣಗುಲದವರು
೬೧) ಬನ್ನಿಲವರು
೬೨) ಬಂಡಾರದವರು
೯೪) ವಜಮೂನಿಯವರು
೯೫) ಶುಂಠಿಲವರು
೯೬) ಸಂಕಲವರು
೯೭) ಸಣ್ಣಕ್ಕಿಲವರು
೯೮) ಸದರಿನವರು
೯೯) ಸರ್ವಲವರು

೭೯) ಬಿಳಿಗಾರಿಲವರು
೭೦) ಭೀಮನವರು
೭೧) ಬುಡಮಲ್ಲನವರು
೭೨) ಬೆಳಗೂಗಿನವರು
೭೩) ಬೆಳ್ಳಿಲವರು
೭೪) ಬೇವಿನವರು
೭೫) ಬೊಟ್ಟಿಲವರು
೭೬) ಬೊಮ್ಮೆ(ಒಮ್ಮ)ಡ
೭೭) ದೇವನವರು
೭೮ ಮಲ್ಲಗಿನವರು
೭೯) ಮಜ್ಜಲವರು
೮೦) ಮಳಕನ್ನೆಲುವರು
೮೧) ಮೆಟ್ಟಲವರು
೮೨) ಮೆಂಗಲವರು
೮೩) ಮಳಶೆಟ್ಟಲವರು
೮೪) ಮಾರಿಲವರು
೮೫) ಮ್ಯಾಕಲವರು
೮೬) ಮುರಿಂಡಲವರು
೮೭) ಮುಮ್ಮಡಲವರು
೮೮) ಮುತ್ತಿನ ಸತ್ತರಗಿಲವರು
೮೯) ಮೂರಾ ಹೆಂಡಿನವರು
೯೦) ಮನೆಲವರು
೯೧) ಯಾತಪತ್‌ದವರು
೯೨) ಯಾಗಸತ್ತೇದೆವರು
೯೩) ರಾಯಣ್ಣದವರು
೧೦೦) ಸಮೇಲವರು
೧೦೧) ಸಾವಂತಲವರು
೧೦೨) ಸಿಪಾರಲವರೂ
೧೦೩) ಸೋಮದೇವರನವರು
೧೦೪) ಹನಚಿಲವರು
೧೦೫) ಹಟ್ಟೇಲವರು
೧೦೬) ಹಂಗೆಬನ್ನಲವರು
೧೦೭) ಹಾಲಿನವರು
೧೦೮) ಹಾವೂಲರು
೧೦೯) ಹುಲಿನವರು
೧೧೦) ಹೆಣ್ಣಿನವರು
೧೧೧) ಹೋನ್ನಂಗರದವರು
೧೧೨) ಹೊನ್ನ ಗಂಟಿಯವರು
೧೧೩) ಹೊನ್ನ ಭೇಜಿಯವರು
೧೧೪) ಹೊನ್ನ ಕರಾರಿಯವರು
೧೧೫) ಹೊನ್ನ ವೀರಗಂಟೆಯವರು
೧೧೬) ಹೊನ್ನ ದಾಸ್ಯಾಳದವರು
೧೧೭) ಹೊನ್ನ ಸಿಂಪೆಗೆಯವರು
೧೧೮) ಹೊನ್ನಗುಳೆಲವರು
೧೧೯) ಹೊನ್ನ ಕೋರಿಲವರು
೧೨೦) ಹೊನ್ನ ಬನ್ನೆಲವರು
೨೨೧) ಹೂವುಲವರು

ಕೆಲವು ಆದಿವಾಸಿಗಳು ಪಶು ಪಕ್ಷಿ ಗಿಡ ಬಳ್ಳಿ ಪ್ರಾಣಿ ಸೂರ್ಯ ಚಂದ್ರಾದಿಗಳು ಇತರ ಭೂತ ವಸ್ತುಗಳೂ ತಮ್ಮ ಮೂಲ ಪುರುಷರೆಂದು ತಿಳಿದು ಕುಲದೇವತೆಗಳೆಂದು ಪರಿಗಣಿಸಿ ವಿಶೇಷ ಗೌರವ ಸೂಚಿಸಿ ಪೂಜ್ಯ ಬಾವದಿಂದ ಅವುಗಳಿಗೆ ಆಗಾಗ್ಗೆ ಪೂಜೆ ಸಲ್ಲಿಸುವುದುಂಟು ಅಷ್ಟೇ ಅಲ್ಲದೇ ವಿಶೇಷ ಸಂದರ್ಭಗಳಲ್ಲಿ ಹೊರತು ಆ ಪ್ರಣಿಗಳ ಮೌಂಸವನ್ನು ಆಗಲಿ ಆ ತರಕಾರಿಗಳನ್ನಾಗಲಿ ಸೇವಿಸುವುದಿಲ್ಲ ಈ ವಿಶೇಷ ಭಾವನೆ ಅನೇಕ ರೀತಿಗಳಲ್ಲಿ ವ್ಯಕ್ತ ವಾಗುತ್ತದೆ ತಮ್ಮ ವಂಶಾವಳಿಯನ್ನು ಒಂದು ಪ್ರಾಣಿ ಸಸ್ಯ ಅಥವಾ ಕಲ್ಲಿನಿಂದ ಸೂಚಿಸಿ ತಾವೂ ಆ ಮೂಲದಿಂದ ಅಥವಾ ಆ ಸಂತತಿಯಿಂದ ಬಂದವರೆಂದೂ ಹೇಳಿಕೊಳ್ಳುತ್ತಾರೆ ಆ ಪ್ರಾಣಿ ಸಸ್ಯವನ್ನು ಕುಲದೇವತೆಯ ಚಿಹ್ನೆ ಎಂದು ಕರೆಯುತ್ತಾರೆ ಅವರಲ್ಲಿ ಆ ಜಾತಿಗೆ ಸೇರಿದ ಪ್ರಾನಿ ಅಥವಾ ಸಸ್ಯಗಳನ್ನು ಕೋಲ್ಲಬಾರದು ನಾಶ ಮಾಡಬಾರದು ಕೊಂದು ತಿನ್ನಬಾರದು ಎಂಬ

ನಂಬಿಕೆಯಿರುತ್ತದೆ ಆದರೆ ಕೆಲವು ವಿಶೇಷ ಸಂದರ್ಭಗಳಲ್ಲಿ ತಿಂದಲ್ಲಿ ಬಾಧಕವಲ್ಲ ಅವರು ಆ ಪ್ರಾಣಿಯ ಸಾವಿಗಾಗಿ ದುಃಖ ಪಡುವುದೂ ಶೋಕ ಸೂಚಿಸುವುದು ಉಂಟು

ಈ ದೃಷ್ಟಿಯಿಂದ ಕುಲ ಎನ್ನುವುದು ಜನಪದ ಬದುಕಿನ ಒಂದು ವಿಶಿಷ್ಟ ಸಂಗತಿ ಎಂದು ಹೇಳಬಹುದು ಅದೇ ರೀತಿ ಕುಲ ಸಂಕೇತರಾಧನೆ ಕೂಡ.

ಅಡಿ ಟಿಪ್ಪಣಿಗಳು

೧) ಡಾ.ಹರಿಲಾಲ್ ಪವಾರ್ =ಹೆಳವರ ಸಂಸ್ಕೃತಿ ಪುಟ ೧೬ ರಿಂದ ೨೦ ೧೯೯೩

೨) ಎಚ್ ಎಲ್ ನಾಗೇಗೌಡ = ಹೆಳವರ ಮತ್ತು ಅವರ ಕಾವ್ಯಗಳು ಪ್ರಸ್ಥಾವಣೆಯ ಪುಟ XXXVII 1982

೩) ಅದೇ ಪುಟ

೪) ಡಾ.ಹರಿಲಾಲ್ ಪವಾರ್ = ಹೆಳವರ ಸಂಸ್ಕೃತಿ ಪುಟ ೨೧,೨೨

೫) ಶ್ರೀಮತಿ ಹೌಸವ್ವ ಪ ಹೆಳವರ ಸಾ ॥ ಹಾರೂಗೇರಿ ಅವರಿಂದ ಕೇಳಿ ಪಡೆದ ಮಾಹಿತಿ

೬) ಶ್ರೀ ಸಿದ್ದಪ್ಪ ಫಕೀರಪ್ಪ ಹೆಳವರ ಸಾ॥ ಹಾರೂಗೇರಿ ಅವರಿಂದ ಕೇಳಿ ಪಡೆದ ಮಾಹಿತಿ.



# ಅಧ್ಯಾಯ ನಾಲ್ಕು

## ಹೆಳವರ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ

೧) ಕುಟುಂಬ ವ್ಯವಸ್ಥೆ.

೨) ಆರ್ಥಿಕ ಸ್ಥಿತಿಗತಿ ಮತ್ತು ಶಿಕ್ಷಣ.

೩) ಹೆಳವರ ಭಾಷೆ.

೪) ಕುಲಕೊಂಡಾಡುವುದು.

೫) ಹೆಳವರ ಸಂಸ್ಕೃತಿ.

  ೧) ಜನನ ಸಂಸ್ಕಾರ

  ೨) ನಾಮಕರಣ

  ೩) ಮೈನೆರೆಯುವುದು.

  ೪) ಮದುವೆ

  ೬) ಹಬ್ಬಗಳ ಆಚರಿಸುವ ಪದ್ಧತಿ.

## ೪ ನೇ ಅಧ್ಯಾಯ

### ಹೆಳವ ಸಮಾಜದ ಜೀವನ ವಿಧಾನ ಹಾಗೂ ಸಾಮಾಜಿಕ ವ್ಯವಸ್ಥೆ

**ಕುಟುಂಬ ವ್ಯವಸ್ಥೆ :**

ಪಿತೃ ಪ್ರಧಾನ ಕುಟುಂಬ ಪದ್ಧತಿ ಹೆಳವರಲ್ಲಿದೆ. ಮನೆಯ ಆಗು ಹೋಗುಗಳಿಗೆ ಕುಟುಂಬದ ಯಜಮಾನನೇ ಹೊಣೆಗಾರ ಇವರು ಒಕ್ಕಲು ಮನೆಗಳಿಗೆ ಹೋದರೆ ಮನೆಯಲ್ಲಿ ಯಾರು ಇರುವುದಿಲ್ಲ ಅಂತಹ ಸಂದರ್ಭದಲ್ಲಿ ವ್ಯವಹರಿಸುವವರೆಲ್ಲ ಹೆಂಗಸರೇ ಹೆಂಗಸರು ಮಕ್ಕಳು ಮನೆಯ ಯಜಮಾನನಿಗೆ ಕೆಲಸದಲ್ಲಿ ನೆರವಾಗುತ್ತರೆ. ಇಬ್ಬರೆ ದುಡಿದರೆ ಸಂಸಾರ ಸಾಗುವುದಿಲ್ಲ ಕುಟುಂಬದವರೆಲ್ಲರೂ ಜೋತೆಗೂಡಿ ದುಡಿದರೆ ಸುಖ ಜೀವನ ಸಾಗಿಸಬಹುದು ಮನೋಭಾವ ಉಳ್ಳವರು ಉತ್ತರ ಕರ್ನಾಟಕದ ಹೆಳವರು ಇಕ್ಕಲು ಮನೆಗಳಿಗೆ ಹೋದರೆ ನಾಲ್ಕೈದು ತಿಂಗಳವರೆಗೆ ಹಿಂತುರುಗಿ ಹಟ್ಟಿಗಳಿಗೆ ಹೋಗುವುದಿಲ್ಲ. ತಮ್ಮ ಗಂಟು ಮೋಟೆಗಳನ್ನು ಚಕ್ಕಡಿಯಲ್ಲಿ ಹಾಕಿಕೊಂಡು ಕುಟುಂಬದವರ ಜೊತೆಗೆ ಹೋಗಬೇಕಾಗುತ್ತದೆ. ಆಗ ಮನೆಯಲ್ಲಿ ವೃದ್ದರನ್ನು ಬಿಟ್ಟು ಹೋಗುತ್ತಾರೆ. ಒಕ್ಕಲುಮನೆಗಳ ಕುಲ ವೃತ್ಥಾಂತಗಳನ್ನು ಹೇಳುವ ಪದ್ಧತಿ ತಂದೆಯಿಂದ ಮಗನಿಗೆ ಮಗನಿಂದ ಮೊಮ್ಮಗನಿಗೆ ಹೀಗೆ ಬೆಳಡೆದು ಬಂದಿರುತ್ತದೆ.ತಂದೆಯೂ ಮಕ್ಕಳು ಸಣ್ಣವರು ಇರುವಾಗಲೆ ಒಕ್ಕಲು ಮನೆಗಳ ಕುಲ ವೃತ್ತಾಂತ ಹೊಗಳಲೂ ಕಲಿಸಿರುತ್ತಾರೆ. ಜೊತೆಗೆ ಅಕ್ಷರ ಜ್ಞಾನವನ್ನು ಮಾಡಿಕೊಟ್ಟಿರುತ್ತಾನೆ.

ಏಕಪತಿತ್ವ ಮತ್ತು ಏಕಪತ್ನಿತವ ಕುಟುಂಬಗಳೇ ಇವರಲ್ಲಿ ಕಾಣಸಿಗುತ್ತವೆ ಅಲ್ಲಲ್ಲಿ ಬಹುಪತ್ನಿತ್ವ ಪದ್ದತಿ ಕಂಡು ಬರುತ್ತದೆ. ಬಾಲ್ಯ ವಿವಾಹ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದ್ದರೂ ಇಂದು ಸಾಕಷ್ಟು ಕಡಿಮೆ ಆಗುತ್ತದೆ. ವಿಧವಾ ವಿವಾಹ ಕೆಲವಡೆ ಕಾಣಸಿಗುತ್ತದೆ ಇದಕ್ಕೆ ಕೂಡಾವಲಿ ಎಂದು ಕರೆಯುತ್ತಾರೆ. ಮದುವೆ ಆದ ಕೆಲವು ವರ್ಷಗಳಲ್ಲಿ ಮಕ್ಕಳು ಬೇರೆ ಆಗುತ್ತಾರೆ ಮತ್ತೆ ಕೆಲವರು ಬಹಳ ದಿನಗಳವರಗೆ ತಾಯಿ ತಂದೆ ಸಹೋದರ ಸಹೋದರಿಯರ ಜೊತೆ ಕೂಡಿರುತ್ತಾರೆ ಮಕ್ಕಳಲು ಬೇರೆ ಆಗಲು ನಿರ್ಧರಿಸಿದಾಗ ಕುಟುಂಬದ ಯಜಮಾನ ಮತ್ತು ಹಿರಿಯರು ಆಸ್ತಿಯಲ್ಲಿ ಸರಿಸಮನಾಗಿ ಹಂಚಿಕೊಡುತ್ತಾರೆ. ತಂದೆಗಿದ್ದ ಇಕ್ಕಲು ಮನರೆವಿಗಳನ್ನು ಎಲ್ಲ ಮನೆಗಳನ್ನು ಹಂಚಿ ಕೊಡುತ್ತಾರೆ ಹಂಚಿಕೊಟ್ಟಿರುವ ಒಕ್ಕಲುಮನೆಗಳಿಗೆ ಮಾತ್ರಕುಲ ಕೊಂಡಾಡಲು ಹೋಗಬೇಕಾಗುತ್ತದೆ.

**ಇಂದಿನ ಆರ್ಥಿಕ ಸ್ಥಿತಿಗತಿ ಮತ್ತು ಶಿಕ್ಷಣ**

ಕಡು ಬಡತನದಿಂದ ಬೆಂದು ಬಳಲುತ್ತಿರುವ ಹೆಳವರ ಆರ್ಥಿಕ ಸ್ಥಿತಿಗತಿ ತುಂಬಾ ಹದಗೆಟ್ಟಿದೆ. ದಿನದಿಂದ ದಿನಕ್ಕೆ ಗಗನೆಕ್ಕೇರುತ್ತಿರುವ ಬೆಲೆಯನ್ನು ನೋಡಿ ದಿಗ್‌ಬ್ರಮೆಗೊಂಡಿದ್ದಾರೆ. ತಾತ ಮುತ್ತಾತರ ಕಾಲದಿಂದ ಬೆಳೆದು ಬಂದ ಕುಲಕೊಂಡಾಡುವ ವೃತ್ತಿ ಇವರ ಪ್ರಧಾನ ಕಸುಬು ಮೊದಲಿನಂತೆ ಒಕ್ಕಲು ಮನೆಯವರಲ್ಲಿ ಕುಲವೃತ್ತಾಂತ ಕೇಳುವ ಅಭಿರುಚಿ ಉಳಿದಿಲ್ಲ ಮೊದಲು

ಹೆಳವ ಬಂದು ಹೋದ ಮನೆ ಸಂಪ್ರದಾಯಸ್ಥರ ಮನೆ ಎಂದು ಜನ ಭಾವಿಸುತ್ತಿದ್ದರು. ಅಷ್ಟೇ ಅಲ್ಲ ಒಕ್ಕಲು ಮನೆಯವರು ಕಾಳು ಕಡಿ ದುಡ್ಡು ದುಗ್ಗಾಣಿ ಬಟ್ಟೆ ಬರೆ ಆಕಳು ಎಮ್ಮೆ ಇವುಗಳನ್ನು ಬಳುವಳಿಯಾಗಿ ಕೊಡುವುದರ ಜೊತೆಗೆ ಬೆಲೆಬಾಳುವ ಭಾವಿಸುತ್ತಿದ್ದರು. ಅಷ್ಟೇ ಅಲ್ಲ ಒಕ್ಕಲು ಮನೆಯವರು ಕಾಳು ಕಡಿ ದುಡ್ಡು ದುಗ್ಗಾಣಿ ಬಟ್ಟೆ ಬರೆ ಆಕಳು ಎಮ್ಮೆ ಇವುಗಳನ್ನು ಬಳುವಳಿಯಾಗಿ ಕೊಡುವುದರ ಜೊತೆಗೆ ಬೆಲೆಬಾಳುವ (ಬೆಳ್ಳಿ –ಬಂಗಾರ) ಆಭರಣಗಳನ್ನು ಕೊಟ್ಟ ಉದಾಹರಣೆಗಳು ಸಾಕಷ್ಟು ಆದರೆ ಇಂದು? ಅದು ಸುಳ್ಳಾಗಿದೆ ಏನೋ ಹೆಳವ ಬಂದಾನೆಂದರೆ ಬಿಕ್ಷುಕರಿಗೆ ದಾನ ಮಾಡಿದಂತೆ ಒಂದಿಷ್ಟು ಕೊಟ್ಟು ಬಂದ ಪೀಡೆ ಬಯಲಾಯ್ತು ಎಂದು ಕಳುಹಿಸುತ್ತಾರೆ. ಹೆಳವರು ಪ್ರಸಿದ್ಧ ಮನೆತನಗಳ ರಾಜ ಮಹಾರಾಜರ ಜನ ಸಾಮಾನ್ಯರ ಹೀಗೆ ವಿವಿಧ ಗುಂಪಿನವರ ವಂಶವೃಕ್ಷವನ್ನು ತಮ್ಮ ಕಡತಗಳಲ್ಲಿ ಬರೆದು ಜೋಪಾನವಾಗಿಟ್ಟಿರುತ್ತಾರೆ.

ಭಾರತವು ಸ್ವಾತಂತ್ರ್ಯ ಸಿಕ್ಕು ನಾಲ್ಕು ದಶಕಗಳುಗತಿಸಿದರು ಜನ ಸಾಮಾನ್ಯರ ಸ್ಥಿತಿಗತಿ ಸುಧಾರಿಸಿಲ್ಲ.ಇವರು ಇನ್ನು ನಿರ್ಗತಿಕರಾಗಿಯೇ ಬಿಕ್ಷೆ ಬೇಡುತ್ತಿದ್ದಾರೆ ಭಾರತದಲ್ಲಿ ಸಾಮಾನ್ಯ ಸಮಸ್ಯೆಗಳಲ್ಲಿ ಬಡತನ ಅನಕ್ಷರತೆ ಇವುಗಳು ತಾಂಡವಾಡುತ್ತಿವೆ ಜನಸಾಮಾನ್ರ ಕನಸುಗಳು ಭಗ್ನಗೊಳ್ಳುತ್ತಿವೆ. ಆದರೆ ಹೆಳವರಿಗೆ ಸೂರ್ಯೋದಯವಾಗುವುದು ಯಾವಾಗ?

ಹೆಳವರಲ್ಲಿ ಕೆಲವರಿಗೆ ಚೂರು ಪಾರು ಭೂಮಿಗಳಿರುವುದರಿಂದ ಬೇಸಾಯದಲ್ಲಿ ನಿರತರಾಗಿದ್ದಾರೆ ಮತ್ತೆ ಕೆಲವರು ಆಡು ಕುರಿ ಕೋಳಿ ಎಮ್ಮೆ ಆಕಳು ಹಂದಿ ಇವುಗಳನ್ನು ಸಾಕಿಕೊಂಡಿದ್ದಾರೆ.

ಈ ಗುಂಪಿನವರು ಬೀಕ್ಷೆ ಬೇಡುವವರು ಬೆರಳಣಿಕೆಯಷ್ಟು ಯವುದಾದರೂ ಒಂದು ಕೆಲಸವನ್ನು ಅವಲಂಬಿಸಿ ಬದುಕುತ್ತಾರೆ ಬೇರೆಯವರಿಂದ ಸಾಲ ಮಾಡಿ ಹಣ ಪಡೆದು ತಂದಿದ್ದರೆ ಅದನ್ನು ಕೆಲವು ದಿನಗಳು ಅಥವಾ ತಿಂಗಳುಗಳಾದ ಮೇಲೆ ಬಡ್ಡಿ ಸಮೇತ ಕೊಡುತ್ತಾರೆ ಇವರುಗಳು ನಂಬಿಗಸ್ಥರು ಅನ್ನ ಹಾಕಿದ ಮನೆಗೆ ದ್ರೋಹ ಬಗೆಯುವುದಿಲ್ಲ ಸಾಲ ಕೊಡಲಿಕ್ಕೆ ದಿನಗಳು ಹೆಚ್ಚು ಕಡಿಮೆ ಆದರೂ ಒಡೆನಿಯಿಂದ ಸಾಲದ ರೂಪದಲ್ಲಿ ಪಡೆದು ತಂದ ಹಣದ ಮೇಲೆ ನೀರಾಡಿಸುವ ಕುಹಿಕ ಬುದ್ದಿ ಇವರಲ್ಲಿಲ್ಲ.

ಅನಕ್ಷಸ್ಥರ ಸಂಖ್ಯೆ ಇವರಲ್ಲಿ ಹೆಚ್ಚು ಪ್ರತಿ ಊರುಗಳಲ್ಲಿ ಕಡ್ಡಾಯ ಶಿಕ್ಷಣಕ್ಕೆ ಒಳಪಡುವ ಇಪ್ಪತ್ತು ಮೊವತ್ತು ಮಕ್ಕಳಿದ್ದರೂ ಅಲ್ಲಿ ಪ್ರಾಥಮಿಕ ಶಾಲೆಗಳ ಅಷ್ಟಕಷ್ಟ ಹೆಳವರು ಗೊಡ್ಡ ಸಂಪ್ರದಾಯ ಮೂಡನಂಭಿಕೆಗಳು ಸಂಪ್ರದಾಯಗಳಿಗೆ ಅಂಟಿಕೊಂಡಿರುವರು ಯಾವುದಾದರೂ ಕಾಯಿಲೆ ಬಂದರೆ ದೇವರ ದಿಂಡಿರುಗಳ ಹೆಸರಿನ ಮೇಲೆ ಹರಕೆ ಹೊತ್ತು ಅದಕ್ಕೆ ತಗುಲುವ ದುಂದು ವೆಚ್ಚವನ್ನು ಮಾಡುತ್ತಾರೆ ಹಬ್ಬ ಹರಿದಿನ ಗ್ರಾಮದೇವತೆಯ ಜಾತ್ರೆ ಇಂತಹ ಸಂದರ್ಭಗಳಲ್ಲಿ ಸಾಲ–ಸೂಲ ಮಾಡಿಯಾದರೂ ಕುರಿ ಮೇಕೆಗಳನ್ನು ಬಲಿಕೊಡುತ್ತಾರೆ ಈ ಕೆಲವು ಕಾರನಗಳು ಇವರ ಬಡತನಕ್ಕೆ ಮೂಲ ಕಾರಣವೆಂದು ಹೇಳಬಹುದು.

## ಹೆಳವರ ಭಾಷೆ:-

ಹೆಳವರಂಥ ಅಲೆಮಾರಿ ಅಥವಾ ಅರೆಅಲೆಮಾರಿ ಗುಂಪಿನ ಜೀವನ ಕ್ರಿಯಯಲ್ಲಿ ಭಾಷೆಯ ಮೌಖಿಕ ಪರಂಪರೆಯದೇ ಪ್ರಮುಖ ಪಾತ್ರ ಆಂದ್ರ ಪ್ರದೇಶದಿಂದ ಕನ್ನಡ ನಾಡಿಗೆ ವಲಸೆ ಬಂದಿರುವ ಹೆಳವರು ಮನೆ ಮಾತು ತೆಲಗು ಉತ್ತರ ಕರ್ನಾಟಕದ ಕೆಲ ಹೆಳವರು ಕನ್ನಡ ಭಾಷೆಯನ್ನು ತಮ್ಮ ಮನೆ ಮಾತನ್ನಾಗಿ ರೂಢಿಸಿಕೊಂಡಿದ್ದರು ಇವರು ವೃತ್ತಿಯ ಕಾರಣದಿಂದ ವಿವಿಧ ಭಾಷಾ ಪರಿಸರಕ್ಕೆ ವಲಸೆ ಹೋಗಿ ಹತ್ತಾರು ಕಡೆ ಸುತ್ತಾಡಿ ಕೆಲವೊಮ್ಮೆ ಅಲ್ಲಿಲ್ಲಿ ನೆಲೆಸಿದ ಕಾರಣ ಈ ಜನಪದ ವೃಂದ ಭಾಷಿಕವಾಗಿ ತುಂಬ ಸಂಕೀರ್ಣ ಸ್ವರೂಪದ್ದಾಗಿದೆ ಕನ್ನಡ ಮರಾಠಿ ಹಿಂದಿ ಮತ್ತೆ ಕೆಲವರು ಉರ್ದು ತಮಿಳು ಭಾಷೆಗಳನ್ನು ಆಡುತ್ತಾರೆ ಗಟ ಪ್ರದೇಶಗಳಲ್ಲಿ ಆ ಭಾಷೆಗಳಲ್ಲಿಯೆ ಕುಲಕೊಂಡಾಡಿ ಜನರ ಮೆಚ್ಚುಗೆ ಪಡೆಯುತ್ತಾರೆ ಹೆಳವರು ಆಡುವ ಕನ್ನಡ ಭಾಷೆಯಲ್ಲಿ ಉತ್ತರ ಕರ್ನಾಟಕದ ಪ್ರಾದೇಶಿಕ ಮಾತುಗಳು ಆಡುತ್ತಾರೆ ಹೆಳವರು ತೆಲಗು ಮಾತಾಡುವುದು ಸಹಜ ಆದರೆ ಕನ್ನಡ ಮರಾಠಿ ಭಾಷೆಗಳನ್ನು ತಮ್ಮ ಮನೆ ಮಾತಾಗಿಯೇ ಬಳಸಿಕೊಂಡಿದ್ದಾರೆ ತಮಾಷೆಯಿಂದ ಹೆಳವರು ತೆಲಗು ಮಾತಾಡುವಾಗ ಅದರಲ್ಲಿ ಮರಾಠಿ ಪದಗಳು ಸಹಜವಾಗಿ ನುಸುಳುತ್ತವೆ. ಹೀಗಾಗಿ ಹೆಳವರು ಒಂದು ಬಗೆಯ ಸಮ್ಮಿಶ್ರ ಭಾಷೆಯ ಜನಪದ ಗುಂಪು ಎಂದು ಹೇಳಬಹುದು.

ಅನೇಕ ಭಾಷೆಗಳ ಜನಗುಂಪುಗಳಿಂದ ಕೂಡಿದ ನಮ್ಮ ರಾಷ್ಟ್ರ ವಿಶೇಷತಃ ದಕ್ಷಿಣ ಭಾರತದ ವಿವಿಧ ಸಂಸ್ಕೃತಿಗಳ ಸಂಗಮವು ಆಗಿದೆ.ಹೆಳವ ಜನಪದ ವೃಂದ ತನ್ನ ಅಲೆಮಾರಿ ಹಂತದಿಂದ ಮೊದಲುಗೊಂಡು ಇಂದಿನವರಗೆ ಜೀವನ ನಿರ್ವಹಣೆಯ ಹಿನ್ನಲೆಯಲ್ಲಿ ದಕ್ಷಿಣ ಭಾರತದ ಬೇರೆ ಬೇರೆ ಪ್ರಾದೇಶಿಕ ಭಾಷೆಗಳನ್ನು ಮೈಗೊಂಡಿಸಿಕೊಂಡು ತಮ್ಮವೃತ್ತಿ ಸ್ವರೂಪವನ್ನು ಕಾಯ್ದುಕೊಂಡು ಬಂದಿದ್ದಾರೆ. ತೀರ ಇತ್ತೀಚಿಗೆ ಪರಿವರ್ತನೆಯ ರಭಸಕ್ಕೆ ಸಿಲುಕಿ ಇತರ ಜನ ಸಮುದಾಯಗಳ ಜನರಂತೆ ಇವರ ಜೀವನ ವಿಧಾನ ವೃತ್ತಿ ಇತ್ಯಾದಿಗಳು ಬದಲಾಗುತ್ತಿರುವುದು ಗಮನಾರ್ಹವಾಗಿದೆ ಕರ್ನಾಟಕದಲ್ಲಿದ್ದು ಕನ್ನಡ ಬಾಷೆಯನ್ನು ಪ್ರಧಾನ ಸಂವಹನ ಮಾಧ್ಯಮವನ್ನಾಗಿ ಬಳಸುವ ಹೆಳವರು ತಮ್ಮ ವೃತ್ತಿ ನಿವರ್ಹಣೆಗಾಗಿ ಭಾಷಾ ಗಡಿಗಳನ್ನು ದಾಟ ಅಲ್ಲಲ್ಲಿಯ ಭಾಷಿಕ ಗುಂಪಿನ ಜೊತೆ ವ್ಯವಹರಿಸುವಷ್ಟು ಮಟ್ಟಿಗೆ ಮಾತ್ರ ಆಯಾ ಭಾಷೆಯನ್ನು ಕಲಿತುಕೊಂಡಿರುತ್ತಾರೆ.ಇದು ಹೆಳವರ ವ್ಯವಹಾರ ಕೌಶಲ್ಯಕ್ಕೆ ಸಾಕ್ಷಿ ಎಂದು ಹೇಳಬಹುದು.

## ಕುಲಕೊಂಡಾಡುವುದು ;-

ಹೆಳವರ ಪ್ರಮುಖ ವೃತ್ತಿ ಒಕ್ಕಲು ಮನೆಗಳ ಕುಲಕೊಂಡಾಡುವುದು ಇವರ ಕಾಲಾನಂತರ ಮನೆ ಮೂರು ಆಸ್ತಿ ಪಾಸ್ತಿ ಮಾಡಿಕೊಂಡಿದ್ದರು ವರ್ಷದಲ್ಲಿ ಒಂದು ಸಲವಾದರೂ ತಮ್ಮ ನಿಗದಿತ ಒಕ್ಕಲು ಮನೆಗಳಿಗೆ ಹೋಗಿ ಬರುವುದು ಒಂದು ರೂಡಿ ನಿಗದಿತ ಹಳ್ಳಿಗಳಲ್ಲಿಯ

ಕೆಲವೊಂದು ಮನೆಗಳನ್ನು ಹಂಚಿಕೊಂಡಿರುತ್ತಾರೆ ಆ ಮನೆತನಗಳ ಎಲ್ಲ ಮಾಹಿತಿ ತಮ್ಮ ಬಳಿ ಇರುವ ಕಡತಗಳಲ್ಲಿ ಬರೆದುಕೊಳ್ಳುತ್ತಾರೆಸತ್ತು ಹೋದವರ ಹೆಸರಿನ ಕೆ:ಳಗಡೆ (O) ಈ ಚಿಹ್ನೆ ಕೊಡುತ್ತಾರೆ ಪ್ರಮೂಖವಾಗಿ ಗಾಣಿಗರು ರೆಡ್ಡಿಗಳು ಗೌಡ ಪಂಚಮಶಾಲಿ ಲಿಂಗಾಯತರು ಉಪ್ಪಾರ ಆದಿಬನಜಿಗ ಕುರುಬರು ಬಿಳಿಜಾಡರು ಜೈನರು ಬೇಡರು ಹೀಗೆ ಅನೇಕ ಸಮುದಾಯದವರ ಕುಲಕೊಂಡಾಡುತ್ತಾರೆ.

ಕ್ಷೇತ್ರ ಕಾರ್ಯದ ಅವಧಿಯಲ್ಲಿ ಕಂಡು ಬಂದ ಮಾಹಿತಿ ಪ್ರಕಾರ ಹೆ:ಳವರ ವೃತ್ತಿ

ಬಿಕ್ಷಾಟನೆ ಎಂದು ಕರೆಯಲಾಗುತ್ತದೆ ಈ ಬಿಕ್ಷಾಟನೆ ಎಂದರೆ ಗತಿಗೆಟ್ಟವರು ಬೇಡುವ ಬಿಕ್ಷೇ ಅಲ್ಲ ಹೆಳವರು ಆಯ್ದುಕೊಂಡ ವಂಶಾವಳಿಯನ್ನು ಜೋಪಾನವಾಗಿಟ್ಟುಕೊಂಡು ವರುಷಕ್ಕೊಮ್ಮೆ ಆಯಾ ಮನೆತನಗಳಿಗೆ ಹೋಗುವುದು ಮತ್ತು ತಮ್ಮ ವೃತ್ತಿ ಗೌರವಕ್ಕೆ ಪ್ರತಿಯಾಗಿ ಸಂಭಾವನೆ ಪಡೆಯುವುದು ಈ ಸಂಭಾವನೆಯನ್ನು ಹೆಳವರು ತಮ್ಮ ಹಕ್ಕು ಎಂದು ಕೇಳುತ್ತಾರೆ ತಮ್ಮ ಒಕ್ಕಲು ಮನೆತಮಗೆ ತಂದೆ ತಾಯಿ ಎಂದು ಭಾವಿಸುತ್ತಾರೆ ಆ ಮನೆತನದ ಜನರನ್ನು ಕಾಡಿಬೇಡಿ ಕಾಳು ಕಡಿ ಬಟ್ಟೆ ಬರೆ ಪಾತ್ರೆ ಧನ ಕನಕ ಹೀಗೆ ಆಯಾ ಮನೆತನಗಳ ಆಥಿಕ ಸ್ಥಿತಿಯನ್ನು ಅರಿತು ದಾನ ಪಡೆಯುತ್ತಾರೆ.

ಹೆಲವರು ಒಕ್ಕಲು ಮನೆಗಳಿಗೆ ಹೋಗುವದಿದ್ದರೆ ಬೆಳಗಿನ ಜಾವ ಎದ್ದು ಸ್ನಾನ ಮುಗಿಸಿಕೊಂಡು ಎತ್ತಿನ ಹಣೆಗೆ ಪೂಜೆ ಮಾಡುತ್ತಾರೆ ಆಮೇಲೆ ಎತ್ತಿನ ಬೆನ್ನ ಮೇಲೆ ಎರಡು ಬದಿಗೆ ಕಾಲು ಕಡಿ ಹಾಕಲಿಕ್ಕೆ ಕೌದಿಯ ಚಿಲುಗಳನ್ನು ಇಳಿ ಬಿಟ್ಟಿರುತ್ತಾರೆ ತಮ್ಮ ಹೆಗಲ ಮೇಲೆ ಕಂಪು ಶಾಲು ಹಾಕಿಕೊಂಡು ಅದರ ಕಡತ ಹಾಕಿರುತ್ತಾರೆ ಎತ್ತಿನ ಮೇಲೆ ಕುಳಿತು ಬಲಗಾಲು ಇತರರಿಗೆ ಕಾಣದಂತೆ ಕೌದಿಯಲ್ಲಿ ಅಥವಾ ಕಂಬಳಿಯಲ್ಲಿ ಮರೆ ಮಾಡಿರುತ್ತಾರೆ ಹೀಗೆ ಮಾಡುವುದರ ಉದ್ದೇಶ ತಾವು ಹೆಳವ ಎಂಬುದರ ಸಂಕೇತ ಒಕ್ಕಲು ಮನೆಗಳ ಮುಂದೆ ಬಂದು ಮೊದಲಿಗೆ ಶಿವಸುತ್ತಿಯಿಂದ ಆರಂಬಿಸಿ ಕುಲದೇವರು ಮನೆದೇವರುಗಳನ್ನು ನೆನೆಯುತ್ತಾ ವೃಂಶವೃಕ್ಷ ಹೇಳಲು ಆರಂಬಿಸಿರುತ್ತಾರೆ.

ಶ್ರೀ ಶವನ ಓಡ್ಡೋಲಗದಲ್ಲಿ
ದೇವಾದಿ ದೇವತೆ ಗಣಂಗಲು
ಇಂದ್ರ ಅಗ್ನಿ ನೈಋತ್ಯ ವರುಣ
ವಾಯು ಕುಬೇರ ಈಶನ್ಯಾದಿ ಅಷ್ಟದಿಕ್ ಪಾಲಕರು
ತಮ್ಮ ತಮ್ಮ ಲೋಕಗಳಿಂದಾ ಇಳಿದು ಬಂದಿರುವರು
ಚಿತ್ರ ಸೇನಾದಿ ಗಂಧರ್ವ ಚಾರನರು ಕಿನ್ನರು
ಕಿಂಪುರುಷರುಶೇಷ ಮೊದಲುಗೊಂಡು

ಸಕಲ ಗಣ ನಾಯಕರು ಧಾವಿಸಿ ಬಂದಿರುವರು
ವಶಿಷ್ಠಾದಿ ಋಷಿಗಳು ನಾರದ ಋಷಿಗಳು
ಸಕಲ ಯೋಗಿ ಪೀತೃ ದೇವತೆಗಳು
ಅಪ್ಸರೆ ರಂಭೆ ಮೇನಕೆ ಊರ್ವಶಿ
ಬ್ರಹ್ಮ ವಿಷ್ಣು ಸಹಿತವಾಗಿ ಬಂದಿರುವರು
ಪುರಾಣ ಕಾಳ ನಂದೇಶ್ವರ ವೀರಚಂದ್ರ
ಘಂಟಾಕರ್ಣ ಮಣಿಭದ್ರ ವೃಕೋದರ
ಕಮಲೇದರ ಕುಂಡಲೇದರ ಮಹೋದರ
ಕಣಾಧಾರ ರಾಹು ಕೇತು ಬೃಂಗೇಶ್ವರ
ಕಾಶಿ ಬ್ರಹ್ಮಾದಿ ತೆತ್ತಿಸಕೋಟಿ ದೇವತೆಗಳು
ಹೀಗೆ ಮೊದಲಾದ ಸಕಲ ಗಣನಾಯಕರು
ಧಾವಿಸಿ ಬಂದು ಮಹಾದೇವರ ಸೇವೆಗೆ
ಅಲಂಕಾರ ಪ್ರಾಯರಾಗಿರುವರು
ತ್ರೇತಾಯುಗ ದ್ವಾಪರಯುಗ ಕಲಿಯುಗ ಮರಿಯುಗ
ಹರಿಮಾರ ಹನ್ನೆರಡು ಸಾವಿರ ಆಗುತ್ತಿದ್ದವು
ಕುಲನೊಬ್ಬ ದೇವರು ಉತ್ಪನ್ನವಾದವು
ಆಗ ನಿಮ್ಮ ಕುದೇವರು ಮನಿದೇವರು ಅಂದ್ರೇ
ಅಣ್ಣಿಗೇರಿಯ ಅಮೃತಲಿಂಗ ಕುಲಗೊಡದ ಬಂಕಯ್ಯಾಲಿಂಗ
ಸೋಗಲದ ಸೋಮಲಿಂಗ ಆದಿಮುನೊವಳ್ಳಿ ಪಂಚಲಿಂಗ
ಬಂಕಾಪುರದ ಕೊಡಲಿಂಗ ಉದಾತ್ತಲಿಂಗ
ಆಗ ನೀವು ನಡಕೋಂಡ ಮನಿದೇವ್ರೂ ಅಂದ್ರೇ
ತಿರುಪತಿ ವೆಂಕಟರಮಣ ಬಲವಾಗಲೆಂತ
ನೋಡ್ರಿ ನಿಮ್ಮ ರೆಡ್ಡಿ ವಾಸ ಬಂಗಾರ ಕಡ್ಡಿ
ಹೇಮರಡ್ಡಿ ಮಲ್ಲಮ್ಮನ ವಂಶಿಕ ನೋಡ್ರಿ
ಆವಾಗ ನೋಡ್ರಿ ನಿಮ್ಮದು
ಅರವತದತಾರು ಬೆಡಗಿನೊಳಗೆ ಹೊನ್ನ ಸಂಗಾಲದವರ
ಬೇಡಗ ನೋಡ್ರಿ ಎಷ್ಟಾನನ್ನ ತಂದೆ
ಶಿವಸುತ್ತಿಯಿಂದ ಹಾಡು ಆರಂಭಗೊಂಡು ಕುಲದೇವರು

ಮನೆದೇವರುಗಳ ಹೆಸರು ಆ ವಂಶದ ಬೇಡಗು ಅಂದರೆ
ಗೋತ್ರ ಬಳಿ ಇತ್ಯಾದಿಗಳನ್ನು ಹೇಳಿ ಆಮೇಲೆ
ಆ ಮನೆಯ ವಂಶವೃಕ್ಷ ಹೇಳಲು ಆರಂಬಿಸುತ್ತಾರೆ.
ಮೂಲಪುರುಷ ಹಿರಿಯ ಹಣಮರಡ್ಡೇರು
ಸಣ್ಣ ಹಣಮರಡ್ಡೇರು ಭೀಮರೇಡ್ಡರು
ಹಿರಿಯ ಹಣಮರೆಡ್ಡರು ಸಂತತಿಯಿಂದ
ಶಿವರೆಡ್ಡೇರು ರಾಮರೆಡ್ಡೇರು
ಸಣ್ಣ ಹಣಮರಡ್ಡೇರು ಸಂತತಿಯಿಂದ
ದೇವರೆಡ್ಡೇರು ಗೌಡರೇಡ್ಡರು ಶ್ಯಾಮರೆಡ್ಡರು
ಭೀಮರೇಡ್ಡೇರು ವೆಂಕಾರಡ್ಡೇರು
ಭೀಮರೆಡ್ಡೇರು ಸಂತತಿಯಿಂದ ಗೋವಿಂದರಡ್ಡೇರು
ಪರಮರೆಡ್ಡೇರು ದಾಸರೇಡ್ಡೇರು ಪರಸರಡ್ಡೇರು
ಒಡಹುಟ್ಟಿದತಂಗಿ ತಿಮ್ಮರೆಡ್ಡ ಗೌಡಶ್ಯಾಣಿ

ಹೀಗೆಯೇ ಮೂಲ ಪುರುಷನಿಂದ ಆ ಮನೆಯ ವಂಶವೃಕ್ಷ ಆರಂಭವಾಗುತ್ತದೆ. ಮೂಲ ಪುರುಷನಿಗೆ ಎಷ್ಟು ಜನ ಸಹೋದರರು ಮತ್ತು ಮಕ್ಕಳು ಮೊಮಕ್ಕಳು ಮರಿಮಕ್ಕಳು ಹೀಗೆ ಹನುಮನ ಬಾಲದಂತೆ ವಂಶವೃಕ್ಷದ ಪಟ್ಟಿ ಬೆಳೆಯುತ್ತದೆ ಮೂಲಸ್ಥಳ ಬಿಟ್ಟು ಬರಲು ಕಾರಣ ಮತ್ತೆ ಯಾವ ಊರಿಗೆ ಬಂದು ನೆಲೆಸಿದರು ಆ ಊರಲ್ಲಿ ಎಷ್ಟು ತಲೆಮಾರುಗಳವರಗೆ ಇದ್ದರು ಅಲ್ಲಿಂದ ಬಿಟ್ಟು ಹೋಗಲು ಕಾರಣ ಇತ್ಯಾದಿ ಚಮತ್ಕಾರಿಕ ಘಟನೆಯನ್ನು ಹೇಳಿ ಸದ್ಯದ ಮನೆಯ ಹಿರಿಯರು ಮಕ್ಕಳು ಮತ್ತು ಮೊಮ್ಮಕ್ಕಳ ವಿವರಣೆಯನ್ನು ಕೇಳಿ ಕೇಳುಗರಲ್ಲಿ ವಿಸ್ಮಯ ಉಂಟು ಮಾಡುತ್ತಾರೆ.

ಮೂಲ ಊರನ್ನು ಬಿಟ್ಟು ಬರುವಾಗ ಅಲ್ಲಿ ನಡೆದಂತಹೊಂದು ಚಮತ್ಕಾರಿಕ ಘಟನೆಯನ್ನು ಹೇಳುತ್ತಾರೆ ರಜಾಕರ ಆಕ್ರಮಣ ಬ್ರಟಿಷರ ದಾಳಿಹೊಲಮನೆಗಳ ಸಂಬಂದ ವ್ಯಾಜ್ಯ ಕಲಹ ಊರಿನ ಗೌಡಕಿ ದೇಸಗತಿ ಹೀಗೆ ಅದು ನಾಡಿನ ಇತಿಹಾಸ ಘಟಿಸಿದ ಒಂದು ಕ್ರಾಂತಿಗೆ ಸಂಬಂದಿಸಿರಬಹುದು ಈ ಕಥೆಗಳು ಅರೆಬರೆ ಆಗಿರುತ್ತವೆ ಪೂರ್ತಿ ಸುಳ್ಳು ಅಲ್ಲ ನಿಜವೂ ಅಲ್ಲ ಎಂಬಂತೆ ಇಂಥದ ಕಥೆಗಳನ್ನು ತಮ್ಮ ಮೌಖಿಕ ಪರಂಪರೆಯಲ್ಲಿ ಉಳಿಸಿಕೊಂಡು ಬಂದ ಹೆಳವರು ಸ್ಮರಣ ಶಕ್ತಿ ಅಗಾದವಾದದ್ದು ಈ ಕಥೆಗಳ ಹಿನ್ನೆಲೆಯಲ್ಲಿ ಒಕ್ಕಲು ಮನೆಗಳ ವಂಶವೃಕ್ಷವನ್ನು ಹೇಳುವುದುಂಟು ಅವರಿಗೆ ಯಾವುದೇ ಒಂದು ಉತ್ಪ್ರೇಕ್ಷಿತ ಸಂಗತಿಯ ಸತ್ಯಾಸತ್ಯೆಯನ್ನು ಪ್ರಶ್ನಿಸಿದಾಗ ಅದು ತಮ್ಮ ಹಿರಿಯರಿಂದ ಬಳುವಳಿಯಾಗಿ ಬಂದೆಂದು ಹೇಳುವ ಜಾಣತನವೂ ಅವರಲ್ಲುಂಟು.

ಇಲ್ಲಿ ಹೆಳವರು ಒಕ್ಕಲು ಮನೆಯವರ ವಂಶವೃಕ್ಷವನ್ನು ಹೇಳುವಾಗ ಒಂದು ಚಮತ್ಕಾರಿಕವಾದ ಸಾಮಾಜಿಕ ಕಾರಣವನ್ನು ಉಲ್ಲೇಖಿಸಿ ಹೇಲುವಾಗ ಅವರು ಆ ಊರನ್ನು ಬಿಟ್ಟು ಬರಲು ಕಾರಣವಾದ ಘಟನೆಯನ್ನು ವಿವರಿಸುವ ಬಗೆ ಹೀಗೆದೆ.

ಆವಾಗ ನೋಡಿ ನಿಮ್ಮ ಹಿರ‍್ಯಾರದು
ದೌಲತ್ತ ಭಾರಿ ದೊಡ್ಡದಿತ್ತ
ಜಿಂದಗಾನಿ ತೂಗಿ ತೂಳಕತಿತ್ತ
ಎಂಟ್ಹತ್ತ ಮಂದಿ ಅಣ್ಣ ತಮ್ಮದ್ಯಾರು ಕೊಡಿದ್ರು
ಆವಾಗಿನ ಕಾಲಕ ಅಂದ್ರ ಸತ್ಯ ಹರಿಚಂದ್ರನಾಂಗ
ದಾನಾ ಧರ್ಮ ಮಾಡುತ್ತಿದ್ದರಂಗ
ಮೂಲ ತಳ ಅಂದ್ರೇ ಇವರದು
ವಿಜಾಪುರ ಜಿಲ್ಲಾ ಪೈಕಿ ಶಿರಡಾಣ
ಆವಾಗ ನೋಡ್ರಿ ನಿಮ್ಮ ಹಿರ‍್ಯಾರು
ಆ ಊರು ದೇಸಗತಿ ಜಾಗಿರತಿ ಮಾಡತಿದ್ರ
ಆಗ ನೋಡ್ರಿ ಬಂಡಾಯದ ಕಾಲದೊಳಗ
ಸಾರಾ ಬಾಕಿ ಬಂದ್ರಂತ
ಆವಾಗ್ಗೆ ನೋಡ್ರಿ ನಿಮ್ಮ ಹಿರ‍್ಯಾರು
ವಾಡೆದೊಳ ಕರ‍್ಕೊಂಡ ಹೋಗಿ
ಚೌಕಾಶಿ ಮಾಡಿದ್ರಂತ
ಬಾರಾ ವರ್ಷದ ಸಾರಾ ಬಾಕಿ ಕೊಡಬೇಕೆಂದ್ರಂತ
ಇವರಿಗೆ ದಿಗಲು ಬಡದು ಅಣ್ಣ ತಮ್ಮಂದಿರು
ವಾಡೆದೊಳಗೆ ಕುಂತ ಗುಪ್ತ ಮಸಲತ್ತ ಮಾಡಿದ್ರಂತ
ಅಟ್ಟೋತ್ತಿಗೆ ಜಕಾ ಜಕಾ ಹೊಳೆಯುವ
ಪಿತಾಂಬರ ಸೀರೆ ಉಟ್ಟುಕೊಂಡು
ತಿಮ್ಮಮ್ಮ ಗೌಡಶ್ಯಾನಿ ಹೊರಗ ಬಂದಳಂತ
ಅವಳಿಗಿ ನೋಡಿ ತುರುಕುರು ನಿಟ್ಟುಸಿರು ಬಿಟ್ರಂತ
ಇದೇ ವ್ಯಾಳೆ ಮತ್ತೋಮ್ಮೆ ಸಿಗುವುದಿಲ್ಲ
ಹ್ಯಾಂಗರೆ ಮಾಡಿ ಈ ಗಿಳಿ
ಹಾರಿಸಕೊಂಡು ಹೋಗಾಮು ಎಂದು
ಹಕಮತ ಮಾಡಿದ್ರಂತ

ಅಟ್ಟೋತ್ತಿಗೆ ಅವಳ ಅಣ್ಣದ್ಯಾರಿಗೆ ಕರಿಸಿದ್ರಂತ
ನಿಮ್ಮ ಬಾರಾ ವರ್ಷದ ಬಾಕಿ ಸೂಟ್ ಮಾಡ್ತವ್
ನಿಮ್ಮ ಒಡ ಹುಟ್ಟಿದ ತಂಗಿ ತಿಮ್ಮಗೌಡಶ್ಯಾನಣಗಿ
ನಮ್ಮ ಹಿಂದ ಕಳಸ್ತಿ ಎಂದು ಜಬರಾಯಸಿದ್ರಂತ
ಆಗ ಅಣ್ಣ ತಮ್ಮರು ವಿಚಾರ ಮಾಡಿ
ಎಲೋ ಶಿವನೆ ಇದೆಂಥಾ ಮಾತ
ನಮ್ಮ ಬದುಕು ಕೇಳಲಿಲ್ಲ ಬಾಳೇ ಕೇಳಲಿಲ್ಲ
ಇವರ ನೋಡಿದ್ರ ಕೆಟ್ಟ ತುರಕರು
ನಾವು ನೋಡಿದ್ರ ಏಕ ಜಾತಿನಿಷ್ಟಾವಂತರು
ನಮ್ಮ ಕೃತೀ ಇವರು ತಪ್ಪಿಸಿಕೊಂಡು ಹೋಗ್ಯಾರ್ಧು
ಇವರ ನಮ್ಮ ಕಾಲ ಮೇಲುನ ಧೂಳು
ಎಂದು ಅಣ್ಣ ತಮ್ಮದ್ಯಾರು ಗುಪ್ತ ಇಚಾರ ಮಾಡಿ
ವಾಡೆದೊಳ ಕರೆಕೊಂಡ ಹೋಗಿ
ತುರಕರನ ಚಂಡ ಚಂಡ ಗುದ್ದಿದರು
ಜಕಾ ಜಕಾ ಹೊಳೆಯುವ ಕೊಡ್ಲಯಿಂದ
ನಾಕೈದು ಮಂದಿಯ ರುಂಡ ಹಾರಿಸಿದ್ರು
ಮತ್ತೆ ಕೆಲವರು ತಪ್ಪಿಸಿ ಓಡಿ ಹ್ವಾದ್ರು
ಇನ್ನು ಮುಂದ ಈ ಊರಾಗ ಇರ್ಬಾರ್ದು
ತುರಕಾರ ಸೈನ್ಯ ಬಂದು ನಮಗ ಬಡುದಿಲ್ಲೆಂದು
ರಾತೋ ರಾತ್ರಿ ಕೈಗೆ ಸಿಕ್ಕಿದ ವಸ್ತು ಒಡವೆ
ಕುಲ್ಲಾರ ಬಂಡಿಯೊಳಗ ಹೇರಿಕೊಂಡು ಅಲ್ಲಿಂದ
ಹತ್ತು ಮಂದಿ ಅಣ್ಣ ತಮ್ಮದ್ಯಾರು
ಒಡಹುಟ್ಟಿದ ತಂಗಿ ತಿಮ್ಮಗೌಡಶ್ಯಾಣಿ
ಬಲಕ್ಕೆ ಬಲವಂತನೆಂಬ ಗೂಳಿ
ಎಡಕ್ಕೆ ಎಡವಂತನೆಂಬ ಗೂಳಿ
ಮಲ್ಲಕ್ಕೆ ತೊತ್ತ ಬಾಣಗಿತ್ತಿ
ಅಮಗ್ಯಾ ಸೊಣಗ್ಯಾ ಎಂಬ ನಾಯಿಗಳು
ಗೋಪಾಲಕರ ಆರೇಳು ಜನ
'ಇವರೆಲ್ಲರನ್ನೂ ಕರೆದುಕೊಂಡು

ಬೆಳ್ಗಾನ ಬೆಳಗಾಗುವದರೊಳಗೆ
ದೂರ ದೇಶ್ಯಾಕ ಹೋಗುನಂತ ಹೊರಟ್ರು
ನಡು ದಾರ್‍ಯಾಗ ಭೀಮಾಹೊಲಿ ಅಡ್ಡ ಬಂತು
ಆಗ ಏನು ಮಾಡುವಂತ ಚಿಂತಿ ಮಾಡಿದ್ರು
ಮೊದಲಿನ ದಿನಮಾನದಲ್ಲಿ ನಾವಿಲ್ಲ
ಸಿಂಗಡಿಲ್ಲ ಸೇತುವೆಯಲ್ಲ
ಮಹಾಚಿಂತಿ ಮಹಾದುಃಖ ಮೂಡಲಿಖತ್ರು
ಆವಾಗ ನೋಡ್ರಿ ಒಡಹುಟ್ಟಿದ ತಂಗಿ
ತಿಮ್ಮಗೌಡಶ್ಯಾಣಿ ಮಹಾಭಗವತಿವಂತಳು
ಅಣ್ಣಗಳಿರಾ ನಿವೇನು ಅಂಜಬ್ಯಾಡ್ರಿ ಅಳಕಬ್ಯಾಡ್ರಿ
ನಾಬೇಡಿದಂತ ವಸ್ತುಗಳು ತಂದ ಕೊಡ್ರಂದಳು
ಕರಿಯ ಕಂಚಾಲ ಮರಕ್ಕೆ ಹೋಗಿ
ಕರಿ ಕಣ್ಣಿನ ತೆಂಗಿನಕಾಯಿ
ಗೂನ ಮರದ ಬಾಳೆಯ ಹಣ್ಣು
ಉಡಿ ಅಕ್ಕಿ ಸಾಮಾನುಗಳನ್ನು ತರಿಸಿ
ಹಸಿರು ಸೀರೆ ಹಸಿರು ಕುಬಸ ತೊಟ್ಟು
ಕೈಯಲ್ಲಿ ಕಂಚಿನ ದಾರುತಿ ಹಿಡಕೊಂಡು
ಗಣಕಾಲ ಮೊಣಕಾಲ ಮಟಾ ನೀರಲ್ಲಿ ಹೋಗಿ ನಿಂತ್ಲು
ವಂಶಿಕ ಹಿರಿಯ ಹಣಮರೆಡ್ಡರ ಅಂದ್ರು
ಮುಂದ ನೋಡ್ರಿ ಇವರ ವಂಶಿಕ
ಹಿರಯ ಗೋವಿಂದರೆಡ್ಡರು ಗೋವಿಂದರೆಡ್ಡೇರು
ಸಂತತಿಯಿಂದ ರಮೇಶರೆಡ್ಡೇರು ಶಾರದಾರಡ್ಡೇರು
ಪರಮರೆಡ್ಡೇರು ಸಂತತಿಯಿಂದ ಮಕ್ಕಳಿಲ್ಲರಿ
ದಾಸರಡ್ಡೇರ ಸಂತತಿಯಿಂದ ತಿಮ್ಮಗೌಡಶ್ಯಾಣಿ
ಬಾಬುರೆಡ್ಡೇರ ಪನಸರಡ್ಡೇರ ಸಂತತಿಯಿಂದ
ಅಶೋಕರಡ್ಡೇರು ಭೀಮರೆಡ್ಡೇರು ಈ ಕಡೆ ನೋಡ್ರಿ
ಭರಮರಡ್ಡೇರು ಬಳ್ಳಿ ದೊಡ್ಡದಾಗಲಂತ
ಹಣಮರಡ್ಡೇರ ಬಸರೆಡ್ಡರು ಭೀಮರೆಡ್ಡರು ಬಳ್ಳಿ
ದಾಸರೆಡ್ಡೇರ ಸಂತತಿ ಬಳಗ

ಶರಣರೆಡ್ಡೇರ ನೋಡ್ರಿ ಸೋಮಮ್ಮನವರ
ಸೋಮಮ್ಮನವರ ಗಂಡ ಕೃಷ್ಣರೇಡ್ಡರ
ಇವರ ಮುಂದ ಐನಾಪುರಕ್ಕೆ ಹೋದ್ರಂತ
ನೋಡ್ರಿ ಎಪ್ಪಾ ನನ್ ತಂದೆ .....
ತುಂಬಿ ತುಳುಕುತ್ತಿರುವ ಗಂಗಾಂಗ ಕೈಮುಗಿದು
ಏ ಗಂಗಮ್ಮ ತಾಯಿ ನನ್ನ ಬಾಳು
ನಿನ್ನ ಬಾಳು ಒಂದೇ ಐತಿ
ನನಗೆ ದಾರಿ ಮಾಡಿಕೊಂಡು ಎಂದು
ಸೆರೆಗೊಡ್ಡಿ ಬೇಡಿ ಕಂಚಿನದಾರುತಿ ಬೆಳಗಿದಳು
ತಿಮ್ಮಗೌಡಶ್ಯಾಣಿ ಭಾವ ಭಕ್ತಿಗೆ ಮೆಚ್ಚಿ
ಉಕ್ಕಿ ಹರಿಯುತ್ತಿರುವ ಭೀಮಾನದಿ
ಸಮಾಧಾನದಿಂದ ಹರಿಯ ತೊಡಗಿದಳು
ಜೀರನಗಡ್ಡಿ ಕಲ್ಲುಬಂಡೆ ಉಸುಕು ಕಾಣಸ್ತು
ಏ ಅಣ್ಣಗಳಿರಾ ನಿಮ್ಮ ಜೋಡ ಕುಲ್ಲಾರ ಬಂಡಿ
ದಾಟಿಸಿರೆಂದು ತಿಮ್ಮಗೌಡಶ್ಯಾಣಿ ಹೇಳಿದ್ಲು
ಏಲ್ಲರೂ ಹವುಸಿಯಿಂದ ಸಾಮಾನ ತಗೊಂಡ
ನದಿಯ ದಡ ತಲುಪಿದರು
ಎಲ್ಲರೂ ಮತ್ತೊಮ್ಮೆ ಗಂಗಗೆ ಕೈಮುಗಿದು
ರಾತ್ರೋ ರಾತ್ರಿ ಅಲ್ಲಿಂದ ಕೃಷ್ಣಾನದಿ ದಾಟಿ
ನರಗುಂದ ತಾಲೂಕಿನ ಸೋಮಾಪುರಕ್ಕೆ ಬಂದ್ರು
ಅಲ್ಲಿ ಕಷ್ಟ ಪಟ್ಟು ಸಂಪ ಆಸ್ತಿ ಮಾಡಿದ್ರು
ಹಣಮಂತ ದೇವರು ಕನಸಿನಲ್ಲಿ ಬಂದು
ಧರವರಸ ಪರವು ಮಾಡಬೇಕೆಂದು ಹೇಳಿದ್ನಂತ
ಹಣಮಪ್ಪಣ ಅಪುಣೆ ಮೆರೆಗೆಧರಾವರಸಾ ಪರವು ಮಾಡಿದ್ರು
ಮುಂದ ಅಲ್ಲಿ ದುಸಕಾಲಕ್ಕೆ ವ್ಯಾಜ್ಯ ಮಾಡಿಕೊಂಡ್ರು
ಅಲ್ಲಿ ಒಂದ ಬಂಡಿ ಬಿಟ್ಟು
ಅಲ್ಲಿಂದ ಮರಮಲ್ಲ ಗ್ರಾಮಕ್ಕೆ ಬಂದ್ರು
ಅಲ್ಲಿ ಬಂದ ಬಂಡಿ ಉಳಿತು
ಅಲ್ಲಿಂದ ನಾಯಕನೂರ ಗ್ರಾಮಕ್ಕೆ ಎಂದು

ದೇಸಗತಿ ಮಾಡಿದ್ರು ಅಲ್ಲಿ ಒಂದು ಬಂಡಿ ಉಳಿತು
ಅಲ್ಲಿಂದ ಹೆಬ್ಬಸೂರ ಗ್ರಾಮಕ್ಕೆ ಇಬ್ಬರು
ಮುಂದ ಜಗಾಪುರ ಗ್ರಾಮದಲ್ಲಿ ಇದ್ದುಕೊಂಡು
ಸಾಕೆಟ್ ಆಸ್ತಿ ಪಾಸ್ತಿ ಮಾಡಿದ್ರು
ಆವಾಗ ನೋಡ್ರಿ ಇವರಿಗೆ
ಭಪ್ಪರೆ ಹೆಮ್ಮರೆಡ್ಡಿ ಮಲ್ಲಮ್ಮನ
ಹೀಗಯೇ ವಂಸವೃಕ್ಷದ ಹಾಡು ಪ್ರಾರಂಬಿಸಿ ಸದ್ಯ
ಯಾವ ಊರಲ್ಲಿ ಇದ್ದಾರೆ ಎನ್ನುವುದರ ವಿವರಣೆ
ಸರಾಗವಾಗಿ ಬಿತ್ತರಿಸುತ್ತಾರೆ ಈ ಮೇಲಿನ ಹಾಡು

ಅತ್ಯಂತ ಸರಳ ರಚನೆಯಿಂದ ಇರುವುದರಿಂದ ಇದರ ಪ್ರತ್ಯೇಕ ಗದ್ಯರೂಪ ಕೊಡುವ ಪ್ರಯತ್ನ ಮಾಡಿಲ್ಲ.

ಈ ಮೇಲಿನ ವಂಶವೃಕ್ಷದಲ್ಲಿ ಹಲವಾರು ಅಂಶಗಳು ಅಡಗಿಕೊಂಡಿವೆ ತಮ್ಮ ಬಳಿ ಇರುವ ಕಡತಗಳಲ್ಲಿ ಒಕ್ಕಲು ಮನೆಯವರು ಎಲ್ಲ ವಿವರ ಬರೆದು ಕೊಂಡಿರುತ್ತಾರೆ ಆ ಮನೆತನದ ಯಾರಾದರೂ ಬೇರೆ ಊರಿಗೆ ಹೋಗಿದ್ದರೆ ಅಥವಾ ದತ್ತು ಹೋಗಿದ್ದರೆ ಅದರ ವಿವರಣೆಯನ್ನು ಬರೆದುಕೊಂಡಿರುತ್ತಾರೆ ಈ ಹಿನ್ನಲೆಯಲ್ಲಿ ಕೆಲಮೊಮ್ಮೆ ಯಾವುದೇ ಮನೆತನದ ವಂಶಾವಳಿಯನ್ನು ನಿರ್ಧರಿಸುವ ಪ್ರಶ್ನೆ ಬಂದಾಗ ಹೆಳವರ ವಂಶಾವಳಿಯ ಹೊತ್ತಿಗೆ ವಿವರಗಳು ಶಾನುಭೂಗ ಮುಂತಾದವರ ನೆರವಿಗೂ ಬರುವದುಂಟು. ಎಂದು ಹೇಳಲಾಗುತ್ತದೆ ಅದಿಕೃತ ಸರಕಾರಿ ದಾಖಲೆಗಳ ಅಭಾವ ಇದ್ದ ಸಂದಮರ್ಭಗಳಲ್ಲಿ ಇಂದು ಅನಿವಾರ್ಯ ಎಂದು ಭಾವಿಸಲಾಗುತ್ತದೆ. ಈ ವಂಶವೃಕ್ಷದ ಆದಾರದಿಂದ ತಿಳಿದು ಬರುವ ಸಂಗತಿ ಇಷ್ಟು ಹಿರಿಯ ಹಣಮರೆಡ್ಡರು ಮತ್ತು ಅವನ ಸೋದರರು ಒಡಹುಟ್ಟಿದ ತಂಗಿ ತಿಮ್ಮಮ್ಮ ಗೌಡ ಸ್ಯಾಣಿ ಆಳು ಮಕ್ಕಳು ಬುಂಡಿ ನಾಯಿ ಇತ್ಯಾದಿ ಬಾದಶಾಹನ ಅಪ್ಪಣೆ ಮೇರೆಗೆ ನಾರಾ ಬಾಕಿ ವಸುಲಿಗಾಗಿ ಬರುವ ರಜಾಕರು ಕಳ್ಳ ನಾಯಕರಂತೆ ವರ್ತಿಸುತ್ತಾರೆ. ಅವರನಗನು ಸದೆಬಡಿದು ತಮ್ಮ ಹಿತದೃಷ್ಟಿಯಿಮದಾ ಬೇರೆ ಕಡೆಗೆ ವಲಸೆ ಹೋಗುವದು ಸಹಜ. ಆದರೆ ಎಂಥಾ ಗಂಡಾಂತರ ಬಂದರೆ ಅದಕ್ಕೆ ಹೆದರದೆ ದೈರ್ಯದಿಂದಾ ಯಾವುದಾದರು ಒಂದು ಉಪಾಯ ಹುಡುಕಿ ಅಲ್ಲಿಂದಾ ಪಾರಾಗಿ ಹೋಗುವ ಜಾಣ್ಮೆ ಬಲು ಸೊಗಸಾದದ್ದು ಇಂತಹ ಘಟನೆಗಳೆ ಹೆಳವರ ಕಥೆಗಳಿಗೆ ಮೂಲ ಆಕರ.

## ಹೆಳವರ ಸಂಸ್ಕೃತಿ

೧) ಜನನ ಸಂಸ್ಕಾರ– ಸಾಮಾನ್ಯವಾಗಿ ನಮ್ಮ ಹಿಂದೂ ದರ್ಮದಲ್ಲಿ ಮದುವೆಯಾದ ಹೆನ್ಣು ಮಗಳು ಬಸುರಿಯಾದರೆ ಅವಳ ತಂದೆ ತಾಯಿ ಅಣ್ಣ ತಮ್ಮ ಇನ್ನಿತರ ಕುಟುಂಬದ

ಸದಸ್ಯರು ಸಮಾಜದ ಬಂದು ಬಳಗದವರಿಗೆ ಅತ್ಯಂತ ಸಂತೋಷದ ಸಂಗತಿಯಾಗಿದೆ ಹೆಣ್ಣು ಮಕ್ಕಳು ಬಸುರಿಯಾದ ಸಂಥರ್ಭದಲ್ಲಿ ಆಚರಿಸುವ ಸಂಪ್ರದಾಯಗಳು ನಂಬಿಕೆಗಳು ಆಯಾ ಜ್ಯಾತಿ ಸಮುದಾಯದವರ ಸಮಸ್ಕೃತಿಯನನು ಅವಲಂಬಿಸಿದೆ ಸಮುದಾಯದಿಂದಾ ಸಮುದಾಯಕ್ಕೆ ಭಿನ್ನ ವಾಗಿರುತ್ತದೆ. ಹೆಲುವ ಸಮುದಯದಲ್ಲಿ ಮದುವೆ ಯಾದ ಹೆಣ್ಣು ಬಸುರಿಯಾದರೆ ಹೆಣ್ಣಿನ ತಂದೆ–ತಾಯಿಗಳು ಮಗಳಿಗೆ ಬಯಕೆ ಅಡುಗೆ ಮಾಡಿಕೊಂಡು ಹೋಗಿ ತವರಿನ ಊಟ ಮಾಡಿಸುತ್ತಾರೆ. ಮುತ್ತೈದೆಯರು ಕೂಡಿಕೊಂಡು ಊಡಿ ಯುಂಬುವ ಕಾರ್ಯ ಮಾಡುತ್ತಾರೆ. ಈ ಸಂದರ್ಭದಲ್ಲಿ ಎಲ್ಲ ಸ್ತ್ರಿಯರು ಕೂಡಿಕೊಂಡು ಹಾಡುವ ಸೋಬಾನ ಗೀತೆಗಳು ಸಾಮಾನ್ಯವಾಗಿ ಶೃಂಗಾರ ಗೀತೆಗಳು ಆಗಿರುತ್ತವೆ ಈ ಬಗೆಯ ಶ್ರಂಗಾರ ಗೀತೆಗಳನ್ನು ಹಾಡುವದರಿಂದಾ ಬಸುರಿ ಹೆಣ್ಣು ಮಗಳು ಉಲ್ಲಾಸಿತಳಾಗುತ್ತಾಳೆ ಎಂಬ ನಂಬಿಕೆ ಹೆಲವ ಸಮುದಾಯದಿ ಈ ಸಂದರ್ಭದಲ್ಲಿ ಹೇಳುವ ಸೋಬಾನ ಹಾಡುಗಳು

ಕಾಯಿಬೇಕ ಕಾಯಿಬೇಕ
ಯಾತರ ಕಾಯಿ ಬೇಕ
ಬಾಳೆಯ ಏಳು ಗೊನೆ ಬೇಕ
ಬಾಳೆಯ ಏಳು ಗೊನೆ ಬೇಕ
ನನ್ನ ಗಂಗವ್ವಗ ಬಾಲ್ಯಾರ ಬಂದ
ಉಡಿ ತುಂಬಬೇಕ ಕಾಯಿಬೇಕ
ಕಾಯಿಬೇಕ ಯಾತರ ಕಾಯಿಬೇಕ
ತೆಂಗಿನ ಏಳು ಗೊನಿಬೇಕ
ತೆಂಗಿನ ಏಳು ಗೊನಿಬೇಕ
ನನ್ನ ಗಂಗವ್ವಗ ತಂಗ್ಯಾರ ಬಂದ
ಉಡಿ ತುಂಬಬೇಕ ಕಾಯಿಬೇಕ ಕಾಯಿಬೇಕ
ಯಾತರ ಕಾಯಿ ಬೇಕ
ನಿಂಬೆಯ ಏಳು ಗೊನೆ ಬೇಕ
ಯಾತರ ಕಾಯಿ ಬೇಕ
ನಿಂಬೆಯ ಏಳು ಗೊನೆ ಬೇಕ
ನನ್ನ ಗಂಗವ್ವಗ ರಂಬ್ಯಾರ ಬಂದು
ಉಡಿ ತುಂಬೇಕ ಕಾಯಿಬೇಕ
ಕಾಯಿಬೇಕ ಯಾತರ ಕಾಯಿ ಬೇಕ
ಅಡಿಕೆಯ ಏಳು ಗೊನೆ ಬೇಕ

ಅಡಿಕೆಯ ಏಳು ಗೊನೆ ಬೇಕ
ನನ್ನ ಗಂಗವ್ವಗ ಅತ್ತಿಗೆಯಾರು ಬಂದು
ಉಡಿ ತುಂಬಬೇಕ
ಕಾಯಿಬೇಕ ಕಾಯಿಬೇಕ
ಯಾತರ ಕಾಯಿ ಬೇಕ
ಮಾವಿನ ಏಳು ಗೊನೆ ಬೇಕ
ಮಾವಿನ ಏಳು ಗೊನೆ ಬೇಕ
ನನ್ನ ಗಂಗವ್ವಗ ಮುತ್ತೈದೆಯಾರು ಬಂದು
ಉಡಿ ತುಂಬಬೇಕ
ಕಾಯಿಬೇಕ ಕಾಯಿಬೇಕ
ಯಾತರ ಕಾಯಿ ಬೇಕ
ಉತ್ತತ್ತಿಯ ಏಳು ಗೊನೆ ಬೇಕ
ಉತ್ತತ್ತಿಯ ಏಳು ಗೊನೆ ಬೇಕ
ನನ್ನ ಗಂಗವ್ವಗ ಉತ್ತಮರು ಬಂದು
ಉಡಿ ತುಂಬಬೇಕ

ಮೇಲಿನ ಹಾಡು ಸಾಮಾನ್ಯವಾಗಿ ಹೆಣ್ಣು ಮಕ್ಕಳು ಬಸುರಿಯಾದಾಗ ಬಯಸುವ ಹಣ್ಣು ಕಾಯಿಗಳ ವರ್ಣನೆ ಬರುತ್ತದೆ. ಈ ಸಂದರ್ಭದಲ್ಲಿ ವಿವಿದ ಬಗೆಯ ಬಯಕೆಯ ಹಾಡುಗಳನಗನು ಹೇಳಿ ಬಸುರಿಯ ಉಡಿಯಲ್ಲಿ ಹಣ್ಣು ಕಾಯಿಗಳನ್ನು ಹಾಕಿ ಆರತಿ ಬೆಳಗುತ್ತಾರೆ. ಚೊಚ್ಚಲು ಹೇರಿಗೆ ತವರೂರಿನಲ್ಲಿ ಮಾಡುತ್ತಾರೆ. ಏಳು ತಿಂಗಳು ಕಳೆದ ಬಳಿಕ ಕುಬುಸದ ಸಂಪ್ರದಾಯ ಮಾಡಿ ಬಸುರಿಯನ್ನು ತವರಿಗೆ ಕರಕೊಂಡು ಹೋಗುವದು ರುಢಿ ಸಂಪ್ರದಾಯ ಬಸುರಿಯ ೯ ತಿಂಗಳು ೯ ದಿನಗಳು ಆದ ನಂತರ ಬೇನೆಯಿಮದಾ ನರಳುತ್ತಿದ್ದರೆ ಊರಿನಲ್ಲಿ ಅತ್ಯಂತ ಅನುಭವಿಗಳಾದ ಸುಲಗಿತ್ತಿಯನ್ನು ಃಏಳಿ ಬರುತ್ತಾರೆ. ಸೂಲಗಿತ್ತಿಯರು ಬಂದು ಹೆರಿಗೆ ಮಾಡಿಸುತ್ತಾರೆ. ಮಗುವಿನಿಂದಾ ಕತ್ತರಿಸಿದ ಹೊಂಕಳು ಬಳ್ಳಿಯನ್ನು ಮನೆಯ ಮುಂದೆ ಒಂದು ಗುಂಡಿ ತೋಡಿ ಅದರಲ್ಲಿ ಹುಗಿಯುತ್ತಾರೆ. ಅದನ್ನು ಇತರ ಪ್ರಾಣಿ ಪಕ್ಷಿಗಳು ಕೆದರಂತೆ ಹುಂಡಿಯ ಮೇಲೆ ಮುಳ್ಳು ಕಲ್ಲುಗಳನ್ನು ಇಟ್ಟು ಮುಚ್ಚುತ್ತಾರೆ ಸೂಲಗಿತ್ತಿಯರಿಗೆ ಒಂದೋಂದು ಶೇರು ದಾನ್ಯ ೫೦ ರೂಪಾಯಿ ಸಿರೆ ಕುಬುಸ ಕಾಣಿಕೆಯಾಗಿ ಕೊಡುತ್ತರೆ ಐದೇಶಿ ಕಾರ್ಯ ಮಾಡುವವರಿಗೂ ಬಾಣಂತಿಯ ಬಳಿ ಅವಳ ಸುರಕ್ಷತೆಗಾಗಿ ಅವಳ ಸಹಾಯಕ್ಕಾಗಿ ಒಬ್ಬಳನ್ನು ಇಡುತ್ತಾರೆ. ಅವಳು ೫ ದಿನಗಲ ವರೆಗೆ ಬಾಣಂತಿಯ ಎಲ್ಲ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಾರೆ ಸುಮಾರು ಒಂದು ತಿಂಗಳವರೆಗೆ ಬಾಣಂತಿಗೆ ಮತ್ತು ಮಗುವಿಗೆ ಪ್ರತಿ ದಿನ ಎರಡು ಹೊತ್ತು

ಬಿಸಿನೀರಿನಿಂದಾ ಸ್ನಾನ ಮಾಡಿಸುತ್ತಾರೆ ಮತ್ತು ಬಣಂತಿಗೆ ಮಾಂಸಹಾರದ ಅಡುಗೆ ಮತ್ತು ಸಿಹಿ ಅಡುಗೆಯನ್ನು ನೀಡುತ್ತಾರೆ. ಹಡೆದ ಐದನೇ ದಿನಕ್ಕೆ ಮಗುವಿಗೆ ಐದೇಶಿ ಕಾರ್ಯ ಮನಾಥುತ್ತಾರೆ, ಅಂದು ಯುವತಿಯರು ಸಮೀಪದ ಹಳ್ಳ, ಹೋಳೆ ಬಾವಿಗೆ ಕರೆದುಕೊಂಡು ಹೋಗುತ್ತಾರೆ ಅಲ್ಲಿ ಗಂಗೆಗೆ ಪೂಜೆ ಸಲ್ಲಿಸುತ್ತಾರೆ. ಪೂಜೆ ಸಲ್ಲಿಸಿ ನೀರು ತೆಗೆದುಕೊಮಡು ಬರುತ್ತರೆ ಅದೆ ನೀರಿನಿಂದಾ ಸಿಹಿ ಅಡುಗೆ ಮಾಥಿ ಕುಲದೇವತೆಗೆ ನೈವದ್ಯ ಹಿಡಿಯುತ್ತಾರೆ ೧೩ ನೆ ದಿನಕ್ಕೆ ಹದಿಮೂರದೇಶಿ ಕಾರ್ಯ ಮಾಡುತ್ತಾರೆ ಅಂದರೆ ಬ್ರಹ್ಮನು ಶೆಟವಿ ತಾಯಿಗೆ ರೂಪದಲ್ಲಿ ಬಂದುಹಣೆಬರಹ ಬರೆಯುತ್ತಾಳೆ ಎಂಬ ನಂಬಿಕೆ ಹೆಳವರ ಸಂಪ್ರದಾಯದಲ್ಲಿ ಇಂದಿಗೂ ರುಡಿಯಲ್ಲಿಗದೆ

**ನಾಮಕರಣ:**

ಮಗು ಹುಟ್ಟಿದ ಹದಿನೈದನೆಯ ದಿವಸಕ್ಕೆ ನಾಮಕರನ ಕಾರ್ಯ ಮಾಡುತಾರೆ ಮನೆಯ ಯಜಮಾನ ಪುರೋಹಿತರ ಮನೆಗೆ ಹೋಗಿ ಜನ್ಮಕುಂಡಲಿ ಕೇಲಿಬರುತ್ತದೆ ಪುರೋಹಿತರು ಹೇಳಿದ ಹಸೆರು ಔಪಚಾರಿಕವಾದದ್ದು ಅದನ್ನು ಜನ್ಮನಾಮ ಅಥವಾ ಹುಟ್ಟಿದ ಹೆಸರು ಎಂದು ಕರೆಯುತ್ತಾರೆ ಸತ್ತು ಹೋದ ಪೂರ್ವಜರು ಅಂದರೆ ತಾತ ಮುತ್ತಾತರ ಹೆಸರಿಡುವುದು ರೂಡಿ ಸಂಪ್ರದಾಯ ಅಂದಿನ ದಿನ ಮನೆಯನ್ನು ಸ್ವಚ್ಚಗೊಳಿಸಿ ಮನೆಯ ಮುಂದೆ ರಂಗೋಲಿ ಹಾಕುತ್ತಾರೆ ತಮ್ಮ ಬಂದು ಬಳಗದವರಿಗೆ ಅಹ್ವಾನಿಸುತ್ತಾರೆ ಮನೆಯ ಅಕ್ಕ ಪಕ್ಕದವರನ್ನುದೇವರು ಗುರು ಹಿರಿಯರಿಗೆ ಪೂಜೆ ಸಲ್ಲಿಸುತ್ತಾರೆ.

ಮಗುವಿನ ಕಣ್ಣಿಗೆ ಕಾಡಿಗೆ ಹಚ್ಚಿ ಕಾಲಲ್ಲಿ ಬೆಳ್ಳಿಯ ಕಡಗ ಕೈಯಲ್ಲಿ ಕರಿಮಣಿಯ ಸರ ಹೊಸ ಬಟ್ಟೆ ತೊಡಿಸುತ್ತಾರೆ ಮಗುವಿಗೆ ಹೆಸರಿಡಲು ಸೋದರತ್ತೆಗೆ ಪ್ರಾಧನ್ಯತೆ ಕೊಡುತ್ತಾರೆ ಸೋದರತ್ತಗೆ ಇಂಥಹದ ಹೆಸರಿಡಬೇಕು ಎಂದು ಮೊದಲೇ ಸೂಕ್ಷ್ಮವಾಗಿ ಹೇಳಿರುತ್ತಾರೆ ಸೋದರತ್ತೆಯು ತೊಟ್ಟಿಲು ಬಳಿ ಬಂದು ಮಗುವನ್ನು ಎತ್ತಿ ಮುದ್ದಾಡಿ ಆಮೇಲೆ ಹೆಸರು ಸೂಚಿಸಿ ಕುರ್ರ್...ಕುಕಡಿ ಕುರ್ರ್... ಎಂದು ಐದು ಸಲ ಹೇಳುತ್ತಾಳೆ ಆಗ ಸೆರಗು ಹಿಡಿದ ಸಾಸ ಸಾನಿಂತ ಹೆಣ್ಣು ಮಕ್ಕಳು ಅವಳು ಬೆನ್ನು ಚಪ್ಪರಿಸುತ್ತಾರೆ ಮಗುವಿನ ನಾಮಕರಣಕ್ಕೆ ಬಂದವರು ಮಗುವಿಗೆ ಕಾಣಿಕೆಯಾಗಿ ಬಂಗಾರ ಬೆಳ್ಳಿ ಹೊಸ ಬಟ್ಟೆಗಳನ್ನು ಮಗುವಿಗೆ ಮತ್ತು ತಾಯಿಗೆ ಕಾಣಿಕೆಯಾಗಿ ನೀಡುತ್ತಾರೆ ಅಲ್ಲಿಂದ ಐದು ಧಾನ್ಯಗಲಿಂದ ಕೂಡಿದ ಗುಗ್ಗರಿಯನ್ನು ಎಲ್ಲರಿಗೂ ಹಂಚುತ್ತಾರೆ ಕೊನೆಗೆ ಎಲೆ ಅಡಿಕೆ ಕೊಟ್ಟು ಗೌರವದಿಂದ ಬಿಳ್ಕೋಡುತ್ತಾರೆ.

**ಮೈ ನೆರೆಯುವುದು:**

ಹೆಣ್ಣು ಮೈನೆರೆದಾಗ ಅವಳನ್ನು ಮನೆಯ ಹೊರಗಡೆ ಚಪ್ಪರ ಕಟ್ಟಿ ಮೂರು ದಿನಗಳ ವರೆಗೆ ಇಡುತ್ತಿದ್ದರು ಈಗ ಆ ಸಂಪ್ರದಾಯ ಬದಲಾಗಿದ್ದು ಮನೆಯಲ್ಲಿಯೇ ಯಾವುದಾದರೂ ಒಂದು ಕೋಣೆಯಲ್ಲಿ ಇಡುತ್ತಾರೆ ಅವಳಿಗೆ ಹಾಸಿಗಡೆ ಮತತು ಪ್ರತೇಕವಾದ ತಾಟು ತಂಬಿಗೆಗಳನ್ನು

ಕೊಟ್ಟಿರುತ್ತಾರೆ ಅವಳ ತಾಟು ತಂಬಿಗೆಗಳನ್ನು ಯಾರು ಮುಟ್ಟುವುದಿಲ್ಲ ದಿನಾಲು ಸಪ್ಪನೆಯ ಆಹಾರ ಕೊಡುತ್ತಾರೆ ಮೂರು ದಿನಗಳವರೆಗೆ ಪ್ರತಿದಿನ ಸಾಯಂಕಾಲ ಊರಿನ ಹೆಣ್ಣು ಮಕ್ಕಳು ಆಹ್ವಾನಿತರಾಗಿ ಮನೆಗೆ ಬಂದು ಋತುಮತಿಯಾದವಳನ್ನು ಹಲಿಮನೆಯ ಮೇಲೆ ಕುಳ್ಳಿರಿಸಿ ಸೋಬಾನೆ ಹಾಡುಗಳನ್ನು ಹಾಡುತ್ತಾರೆ ನಾಲ್ಕನೆ ದಿವಸ ಮೈನೆರೆದವಳನ್ನು ಮನೆಯೊಳಗೆ ಕರೆದುಕೊಳ್ಳುತ್ತಾರೆ ಅಂದು ಅವಳನ್ನು ಬಚ್ಚಲಲ್ಲಿ ಕರೆದೊಯ್ದು ಕುಳ್ಳಿರಸಿ ಅವಳ ಅಂಗಾಂಗಳಿಗೆ ಅರಿಷಿಣ ಹಚ್ಚಿ ಎರೆಯುತ್ತಾರೆ ಹೊಸ ಬಟ್ಟೆ ತೋಡಿಸಿ ಒಡವೆಗಳಿಂದ ಅಲಂಕರಿಸುತ್ತಾರೆ ಹೆಣ್ಣು ಮಕ್ಕಳಿಗೆ ಹಸಿರು ಬಳಿ ತೊಡಿಸಿ ಹೂ ಮೂಡಿಸುತ್ತಾರೆ.

## ಮದುವೆ :

ಹೆಳವ ಸಮುದಾಯದಲ್ಲಿ ಮದುವೆಗಳು ಹಿಂದೂ ಸಂಪ್ರದಾಯದಂತೆ ನಡೆಯುತ್ತವೆ ಅದಾಗ್ಯೋ ಕೆಲವು ಸಂಪ್ರದಾಯಗಳು ಭಿನ್ನವಾಗಿವೆ.ಅಲೆಮಾರಿ ಅರೆಅಲೆಮಾರಿ ಗುಂಪಿನವರಲ್ಲಿ ಮದುವೆಗೆ ಸಂಬಂದ ಪಟ್ಟಂತೆ ವಿಧಿ ವಿಧಾನಗಳು ಭಿನ್ನವಾಗಿರುವುದು ಸಹಜ ಪೂರ್ವದಲ್ಲಿ ಐದು ದಿನಗಳು ಕಾಲ ಮದುವೆಗಳು ನಡೆಯುತ್ತಿದ್ದವೆಂದು ಹಿರಿಯರು ಹೇಳುತ್ತಾರೆ.ಆದರೆ ಇಂದು ಸಂಕೀರ್ಣ ಮದುವೆ ಪದ್ದತಿ ರೂಡಿಯಲ್ಲಿದೆ.

ಹೆಳವರಲ್ಲಿ ಸಾಂಪ್ರಾದಾಯಿಕವಾದ ಮದುವೆ ಮೂರು ದಿನಗಳ ಕಾಲ ಹಂದರ ಹಾಕುವ ಶಾಸ್ತ್ರ ಎದುರುಗೊಳ್ಳುವ ಅರಿಷಿಣಶಾಸ್ತ್ರ ಹಾಲುಗಂಬ ತರುವಶಾಸ್ತ್ರ ಐರಾಣಿ ತರುವ ಶಾಸ್ತ್ರ ನೀರು ತರುವ ವಧೂ ವರರನ್ನು ಹಂದರಕ್ಕೆ ಕರೆ ತರುವ ಶಾಸ್ತ್ರ ನೂಲು ಸುತ್ತುವ ಕಾರ್ಯ ಕೊನೆಗೆ ಎಲೆ ಹಂಚುವ ಶಾಸ್ತ್ರದೊಂದಿಗೆ ಮದುವೆ ಕಾರ್ಯ ಮುಗಿಯುತ್ತದೆ.

ಇವರಲ್ಲಿ ವಿವಿಧ ಪಂಗಡಗಳುಂಟು ಉದಾ: ಎತ್ತಿನ ಹೆಳವರು ಚಾಪೆ ಹೆಳವರು ಹಂದಿ ಹೆಳವರು ಇತ್ಯಾದಿ ಇವರು ತಮ್ಮ ತಮ್ಮ ಪಂಗಡಗಳಲ್ಲಿ ಬೆಡಗುಗಳನ್ನು ನೋಡಿ ಮದುವೆ ಆಗುತ್ತಾರೆ ಇವರಲ್ಲಿಯೂ ಮೇಲು ಕೀಳು ಎಂಬ ಭಾವನೆ ತಲೆ ಎತ್ತಿ ನಿಂತಿದೆ ಎತ್ತಿನ ಹೆಳವರು ಮತ್ತು ಗಂಟೆ ಹೆಳವರು ಉಳಿದ ಪಂಗಡದ ವರಿಗೀಮತ ತಾವೂ ಶ್ರೇಷ್ಠರೆಂದು ವಾದಿಸುತ್ತಾರೆ ಹೀಗಾಗಿ ಆಯಾ ಪಂಗಡದವರು ತಮ್ಮಲ್ಲಿಯೇ ಬೆಡುಗಳ ಆಧಾರದ ಮೇಲೆ ಕೊಡು ಕೊಳೆಯ ಸಂಬಂಧ ಬೆಳೆಸುತ್ತಾರೆ ಸಗೋತ್ರ ಮದುವೆ ಪದ್ದತಿ ನಿಷೇದ ಅಕ್ಕನ ಮಗಳು ಮತ್ತು ಅತ್ತೆಯ ಮಗಳನ್ನು ಮದುವೆಯಾಗಲು ಅಭ್ಯಂತರವಿಲ್ಲ ಹೆಳವ ಸಮುದಾಯಗಳಲ್ಲಿ ಮೊದಲು ೬೫ ರೂಪಾಯಿಗಳವರೆಗೆ ಬಾಬಿತ್ತನೆ ಇತ್ತು ಇಂದು ೧೦೦೦ ರೂಪಾಯಿಗಳವರೆಗೆ ಬಾಬಿತ್ತನೆ ಹಣ ನಿಗದಿ ಮಾಡಲಾಗಿದೆ ಆದರೆ ಇತ್ತಿಚೀಗೆ ಈ ತೆರವು ಕೊಡುವ ಪದ್ದತಿಯನ್ನು ರದ್ದು ಮಾಡಿದ್ದಾರೆ.

## ಹೆಣ್ಣು ನೋಡಲಿಕ್ಕೆ ಹೋಗುವುದು:

ಯಾವುದೇ ಮನಯೆಯ ಹೆಣ್ಣು ತಮ್ಮ ಮಗನಿಗೆ ತೆಗೆದುಕೊಳ್ಳಬೇಕೆನಿಸಿದಾಗ

ಶುಭದಿನದಂದು ಐದು ಅಥವಾ ಏಳು ಜನ ಕೊಡಿಕೊಂಡು ಹೆಣ್ಣಿನವರ ಮನೆಗೆ ಹೋಗಬೇಕಾಗುತ್ತದೆ ಅವರಲ್ಲಿ ಇವರು ಅಥವಾ ಏಳು ಜನ ಕೊಡಿಕೊಂಡು ಹೆಣ್ಣಿನವರ ಮನೆಗೆ ಹೋಗಬೇಕಾಗುತ್ತದೆ ಅವರಲ್ಲಿ ಇಬ್ಬರು ಅಥವಾ ಮೂವರು ಮುತ್ತೈದೆಯವರು ಇರುತ್ತಾರೆ ವರನಿಗೆ ಜೊತೆಗೆ ಕರೆದುಕೊಂಡು ಹೋಗುವುದಿಲ್ಲ ಹೋಗುವಾಗ ಉಡಿ ಅಕ್ಕಿ ಸಾಮಾನುಗಳನ್ನು ಒಯ್ಯುತ್ತಾರೆಮನೆಯಿಂದ ಹೊರಟರೆ ಹೆಣ್ಣಿನವರ ಮನೆ ತಲಪ್ಪುವವರೆಗ ದಾರಿ ಉದ್ದಕ್ಕೂ ಯಾವುದೇ ಅಪಶಕುನುಗಳಾಗಬಾರದು ಒಂದು ವೇಳೆ ಅಪಶಕುನುಗಳಾದರೆ ಹೆಣ್ಣು ನೋಡಲಿಕ್ಕೆ ಯಾರಾದರೂ ಹೊಯ್ಕೋಂಡರೆ ಕಾಗೆ ಎಡಕ್ಕೆ ಹೋದರೆ ತೋಳ ಎಡಕ್ಕೆ ಹೋದರೆ ನಾವಲಿಗ ಎದುರಾದರೆ ಹೆಣ್ಣಿನವರ ಮನೆಯಲ್ಲಿ ಕಸಗೂಡಿಸುತ್ತಿದ್ದರೆ ಇತ್ಯಾದಿ ಅಪಶಕುನಗಳೆಂದು ಬಾವಿಸುತ್ತಾರೆ ಜೊತೆಗೆ ಕುಂಟ ಕುರುಡ ಮತ್ತು ಕೈ ಅಥವಾ ಕಾಲಿನ ಬೆರಳು ಕತ್ತರಿಸಿದವನಿಗೆ ಒಯ್ಯುವುದಿಲ್ಲ ಹೆಣ್ಣಿನವರ ಮನೆ ತಲುಪಿದ ಬಳಿಕ ಸಂಪ್ರಾದಾಯದ ಪ್ರಕಾರ ಕೈಕಾಲು ಮುಖ ತೊಳೆದುಕೊಂಡು ಮನೆ ಪ್ರವೇಶಿಸುತ್ತಾರೆ

### ವಧು ಪರೀಕ್ಷೆ:

ವರನ ಕಡೆಯವರ ಸಮ್ಮುಖದಲ್ಲಿ ವಧುವಿಗೆ ಹೆಣ್ಣಿನವರು ಕರೆಸುತ್ತಾರೆವಧು ಅಲಂಕೃತವಾಗಿ ಒಂದು ತಂಬಿಗೆ ನೀರನ್ನು ತೆಗೆದುಕೊಂಡು ಬಂದು ಗಂಡಿನವರ ಮಧ್ಯದಲ್ಲಿಟ್ಟು ಮನೆಯ ಮೇಲೆ ಕೂಡುತ್ತಾಳೆ ಆಗ ವರನ ಕಡೆಯವರು ಉಡಿ ಅಕ್ಕಿ ಸಾಮಾನುಗಳನ್ನು ವಧುವಿನ ಊಡಿಯಲ್ಲಿ ಹಾಕುತ್ತಾರೆ ವಧುವಿಗೆಕೆಲವು ಪ್ರಶ್ನೆಗಳನ್ನು ಕೇಳುತ್ತಾರೆ ವಧು ಒಪ್ಪಿಗೆಯಾದ ಬಲಿಕ ಹೆಣ್ಣಿನವರ ಯಜಮಾನದ ಜೊತೆಗೆ ಮಾತುಕತೆ ಆಡುತ್ತಾರೆ ಮಾತುಕತೆ ಮುಗಿದ ಬಳಿಕ ತಮಗೆ ಅನುಕೂಲವೆಂದು ತೋರಿದ ದಿನ ನಿಶ್ಚಿತಾರ್ಥ ಇಟ್ಟುಕೊಳ್ಳುವರು.

### ನಿಶ್ಚಿತಾರ್ಥ :

ಇದಕ್ಕೆ ಬಾಟಗಿ ಹಾಕುವುದು ಹೆಣ್ಣು ಗಟ್ಟಿ ಮಾಡುವುದು ಕುಂಕುಮ ಹಚ್ಚುವುದು ಕನ್ಯಾನಿಶ್ಚುಯ ಹೀಗೆ ಅನೇಕ ಹೆಸರುಗಳಿಂದ ಕರೆಯುವುದುಂಟು ಗಂಡಿನವರು ಎಂಟು ಹತ್ತು ಜನ ಕೊಡಿಕೊಂಡು ಹೆಣ್ಣಿನವರ ಮನೆಗೆ ಬರುತ್ತಾರೆ ಬರುವಾಗ ಗಂಡಿನವರು ಎಂಟು ಹತ್ತು ಜನ ಕೊಡಿಕೊಂಡು ಹೆಣ್ಣಿನವರ ಮನೆಗೆ ಬರುತ್ತಾರೆ ಬರುವಾಗ ಮುತ್ತೈದೆಯರಿಗೆ ಮತ್ತು ವರನಿಗೆ ಕರೆದುಕೊಂಡು ಬರುತ್ತಾರೆ ಹೆಣ್ಣಿನವರ ಮನೆ ತಲುಪಿದಾಗ ನಿಶ್ಚಿಯ ಕಾರ್ಯದ ಪೂರ್ತಿಸಿದ್ದತೆ ನಡೆಯುತ್ತದೆ ಸಾಯಂಕಾಲ ಹೆಣ್ಣಿನವರ ಮನೆಯ ಮುಂದೆ ಕಾರ್ಯ ಆರಂಭವಾಗುತ್ತದೆ ಗಂಡಿನವರು ತಂದಿರುವ ಬಟ್ಟೆಗಳನ್ನು ತೋಡಿಸಿ ಮಣೆ ಮೇಲೆ ಕೊಡಿಸುತ್ತಾರೆ ಮುತ್ತೈದೆಯರು ಕುಂಕುಮ ಹಚ್ಚಿ ಮೂಗುತಿ ನತ್ತು ಹಾಕಿ ಆರತಿ ಬೆಳಗುತ್ತಾರೆ ಆಮೇಲೆ ಹೆಣ್ಣು ನಿಶ್ಚಿಯ ಆದಂತೆ ಆ ಮೇಲೆ ಬಂದು ಬಳಗದವರಿಗೆ ಸಿಹಿ ಊಟ ಮಾಡಿಸಿರುತ್ತಾರೆ ಊಟ ಮುಗಿದ ಬಳಿಕ ತಾಂಬೂಲ ಹಾಕಿಕೊಳ್ಳುತ್ತಾರೆ ಇದೊಂದು ಹೆಣ್ಣಿನ ಜೀವನದ ಮದುವೆಯ

ಪೂರ್ವದ ಒಂದು ಮಹತ್ವದ ಘಟ್ಟ ಎಂದು ಹೇಳಬಹುದು.

### ದೇವರ ಪೂಜೆ:

ಮದುವೆಯ ನಾಲ್ಕೈದು ದಿವಸಗಳ ಮುಂಚಿತವಾಗಿ ತಮ್ಮ ಹಿರಿಯರಿಗೆ ಪೂಜೆ ಮಾಡುತ್ತಾರೆ ಅಂದು ಮನೆಯನ್ನು ಗೋಮಯದಿಂದ ಸಾರಿಸಿ ಅವರ ಹೆಸರಿನ ಮೇಲೆ ಮಾಡಿಸಿಟ್ಟಿರುವ ಬೆಳ್ಳಿಯ ಪ್ರತಿಮೆಗಳನ್ನು ಹೊರತೆಗೆದು ಕಂಬಳಿಯ ಮೇಲೆ ಇಟ್ಟು ಆಡು ಮರಿಗಳನ್ನು ಬಲಿಕೊಡುತ್ತಾರೆ.

### ಮದುವೆಯ ಪೂರ್ವ ಸಿದ್ದತೆ :

ಹೆಳವರು ಮದುವೆಯನ್ನು ಕೇವಲ ಲೈಂಗಿಕ ಸಂಬಂದವೆಂದು ತಿಳಿಯದೇ ಇದೊಂದು ಪವಿತ್ರವಾದ ದಾರ್ಮಿಕ ಬಂದನವನೆಂದು ನಂಬಿಕೊಂಡಿದ್ದಾರೆ ಮದುವೆಯ ಕೌಟುಂಬಿಕ ಜೀವನದ ಮಹತ್ವದ ಹಂತ ವಯಸ್ಸಿಗೆ ಬಂದ ಗಂಡು ಹೆಣ್ಣುಗಳನ್ನು ಮದುವೆಯ ವಿಧಿ ವಿಧಾನಗಳ ಮೂಲಕ ಒಂದು ಸಾಮಾಜಿಕ ಹೊಣೆಗಾರಿಕೆ ವಿವಾಹದ ಸಂಪ್ರದಾಯದ ಆಚರಣೆಗಳು ಸಮಾಜದಿಂದ ಸಮಾಜಕ್ಕೆ ಜನಾಂಗದಿಂದ ಭಿನ್ನವಾಗಿರಬಹುದು ಆದರೆ ಅದು ಎಲ್ಲ ಜನ ಸಮೂಹಗಳು ಒಪ್ಪಿಕೊಂಡ ಒಂದು ಸಾಮಾಜಿಕ ಹೊಣೆಗಾರಿಕೆಯಾಗಿದೆ ವಿವಾಹದ ಸಂಪ್ರದಾಯದ ಆಚರಣೆಗಳು ಸಮಾಜದಿಂದ ಸಮಾಜಕ್ಕೆ ಜನಾಂಗದಿಂದ ಜನಾಂಗಕ್ಕೆ ಜನ ಸಮುದಾಯಗಳು ಒಪ್ಪಿಕೊಂಡ ಒಂದು ಸಾಮಾಜಿಕ ಮನ್ನಣೆ ಪಡೆದ ಕ್ರಿಯೆಯಾಗಿದೆ.ಜೀವನದಲ್ಲಿ ಬಾಳಿಗೆ ಭದ್ರತೆಯನ್ನು ಒದಗಿಸುವುದರ ಜೊತೆಗೆ ವಿವಾಹ ಸಂತಾನಭಿವೃದ್ದಿ ವಂಶದ ಬೆಳವಣಿಗೆಗೆ ಕಾರಣ ಎನ್ನುವ ಭಾವನೆಯೇ ವಿವಾಹದ ವ್ಯಾಪಕ ಸ್ವೀಕೃತ್ತಿಗೆ ಕಾರಣ ಎನ್ನುವುದು ಸ್ಪಷ್ಟ

ಮದುವೆ ಎಂದಾಕ್ಷಣ ಹೆಳವರಿಗೆ ಅತೀವ ಸಂತೋಷ ವೃತ್ತಿಗಾಗಿ ಹರಿದು ಹಂಚಿ ಹೋಗಿರುವ ಇವರುಗಳು ಒತ್ತೊಟ್ಟಿಗೆ ಕೂಡುವುದು ಇಂತಹ ಸಂದರ್ಭದಲ್ಲಿಯೇ ಬೀಗರು ಎಲ್ಲರೂ ಜೊತೆಗೂಡಿ ಹೆಂಡ ಕುಡಿಯುತ್ತಾರೆ ಒಟ್ಟಾರೆ ಮದುವೆ ಎಂದರೆ ಹೆಳವರಿಗೆ ಅತೀವ ಸಂತೋಷವಾಗುತ್ತದೆ.

ಮದುವೆ ವರನ ಮನೆಯ ಮುಂದೆ ನಡೆಯುತ್ತದೆಮದುವೆಗೆ ತಗಲುವ ವೆಚ್ಚವನ್ನು ವರನ ಕಡೆಯವರೇ ನೋಡಿಕೊಳ್ಳುತ್ತಾರೆ ಮದುವೆಯ ಪೂರ್ತಿ ಜವಾದ್ಬಾರಿಯು ಕೆಲಸ ಹೆಳವರಲ್ಲಿ ಒಬ್ಬನಿಗೆ ಆಯ್ಕೆ ಮಡುತ್ತಾರೆ ಅವನು ಹೆಳವ ಸವಾಜದಲ್ಲಿ ಅತ್ಯಂತ ಹಿರಿಯ ಮುಖಂಡನಾಗಿರುತ್ತಾನೆ ಅವನ ಅನುಭವ ಹಾಗೂ ವಯಸ್ಸಿನ ಆಧಾರದ ಮೇಲೆ ಆತನಿಗೆ ಮದುವೆಯ ಕಾರ್ಯದ ಜವಾದ್ಬಾರಿಯನ್ನು ಕೊಟ್ಟಿರುತ್ತಾರೆ ಮದುವೆಯ ಕಾರ್ಯವು ಮೂರು ಐದು ದಿನಗಳವರಗೆ ನಡೆಯುತ್ತದೆ ಪುರೋಹಿತರನ್ನು ಕರೆಸಿ ಮಂತ್ರ ಹೇಳುವುದು ಮಾಂಗಲ್ಯ ಕಟ್ಟಿಸುವುದು ಮತ್ತು ಬಾಸಿಂಗ ಕಟ್ಟಿಸುವ ಪದ್ದತಿ ಇದೆ.

## ಹಂದರ ಹಾಕುವ ಶಾಸ್ತ್ರ :

ಹಂದರವನ್ನು ಗಂಡಿನವರಮನೆಯ ಮುಂದೆ ಹಾಕುತ್ತಾರೆ ಈ ಕಾರ್ಯವು ಕೂಡಾ ಹೆಳವ ಸಮುದಾಯದ ಮುಖಂಡನ ನೇತೃತ್ವತದಲ್ಲಿಯೇ ನಡೆಯುತ್ತದೆ ಹಂದರ ಮೇಲೆ ತೆಂಗಿನ ಗಿಡದ ಟೊಂಗೆಗಳನ್ನು ಮಾವಿನ ಗಿಡದ ತಪ್ಪಲುಗಳನ್ನು ಹಾಗೂ ತಳಿರು ತೋರಣಗಳನ್ನು ಕಟ್ಟಿ ಕಂಬಗಳಿಗೆ ತೆಂಗಿನ ಗರಿಗಳನ್ನು ಕಟ್ಟಿರುತ್ತಾರೆ.

ಏದುರುಗೊಳ್ಳುವುದು:

ಹೆಣ್ಣಿನವರು ಊರು ತಲುಪಿದಾಗ ಆ ಊರಿನ ಯಾವುದಾದರೊಂದು ಗುಡಿಯ ಹತ್ತಿರ ಬಂದು ಇಲಿಯುತ್ತಾರೆ ಅಲ್ಲಿ ಉಭಯ ಪಕ್ಷದವರು ತಟ್ಟೆಯಲ್ಲಿ ಸಕ್ಕರಿ ಕಂಬಳಿಗಳನ್ನು ಹಾಸಿ ಅದರ ಮೇಲೆ ಒಂದು ತಟ್ಟೆಯಲ್ಲಿ ಕುಂಕುಮ ಹಾಕಿ ಇಡುತ್ತಾರೆ ಉಭಯ ಪಕ್ಷದ ಒಬ್ಬೊಬ್ಬರು ಕುಂಕುಮ ಹಚ್ಚಿ ಸಕ್ಕರಿ ಹಾಕಿ ಎದುರುಗೊಳ್ಳುತ್ತಾರೆ ಆ ಸಂದರ್ಭದಲ್ಲಿನ ಈ ಕೆಳಗಿನಂತೆ ಇದೆ.

### ಅರಿಷಿನ ಶಾಸ್ತ್ರ :

ಸಾಯಂಕಾಲ ಊಟದ ವ್ಯವಸ್ಥರೆ ಮುಗಿದ ಬಳಿಕ ಉಭಯ ಪಕ್ಷದವರು ಅರಿಷಿಣ ವಧುವರರಿಗೆ ಹಂದರಕ್ಕೆ ಕರೆತರುತ್ತಾರೆ ಹಂದರದಲ್ಲಿ ಅರಿಷಿಣ ಕಾರ್ಯ ಮಾಡುತ್ತಾರೆ ಈ ಕಾರ್ಯ ಹೆಳವ ಸಮುದಾಯದ ಮುಖಂಡರ ನೇತೃತ್ವದಲ್ಲಿಯೇ ನಡೆಯುತ್ತದೆ.ಹಸೆಮಣೆಯೇ ಮೇಲೆ ಕೂಡಿಸಿ ಏಣ್ಣೆ ಮಿಶ್ರಿತ ಅರಿಷಿಣವನ್ನು ವಧುವರರಿಬ್ಬರಿಗೂ ಹಚ್ಚುತ್ತಾರೆ ಇದೊಂದು ಹೆಳವರಲ್ಲಿ ವಿಶಿಷ್ಟವಾದ ಆಚರಣೆ ಅಲ್ಲಿಂದ ಮುತ್ತೈದೆಯರು ಎರೆಯುತ್ತಾರೆ ಇಲ್ಲಿಗೆ ಮೊದಲನೆ ದಿನದ ಕಾರ್ಯ ಮುಗಿಯುತ್ತದೆ.

### ಹಾಲುಗಂಬ ತರುವ ಶಾಸ್ತ್ರ :

ಮದುವೆಯ ದಿವಸ ಬೆಳಗಿನ ಜಾವ ವರನ ಸೋದರ ಮಾವ ಹಾಲುಗಂಬ ತರಲಿಕ್ಕೆ ಹೋಗಬೇಕಾಗುತ್ತದೆ ಆಗ ಜೊತೆಗೆ ಅವನ ಹೆಂಡತಿಯನ್ನು ಒಯ್ಯುತ್ತಾನೆ ಬಸರಿಗಿಡ ಅಥವಾ ಇಂಗಳ ಗಿಡಕ್ಕೆ ಪೂಜೆ ಮಾಡಿ ಟೊಂಗೆ ಕಡಿದು ಅಲ್ಲಿಂದ ಅದನ್ನು ತೆಗೆದುಕೊಂಡು ಊರ ಮುಂದೆ ಬಂದು ನಿಲ್ಲುತ್ತಾರೆ ಅವರು ಬಂದದ್ದನ್ನು ತಿಳಿದ ಬಳಿಕ ಉಭಯ ಪಕ್ಷದವರೂ ಕೂಡಿಕೊಂಡು ವಾದ್ಯ ಬಲಗದೊಂದೆಗೆ ಅವರ ಹತ್ತಿರ ಹೋಗಿ ಅವರಿಗೆ ಹೊಸ ಬಟ್ಟೆ ತೊಡಿಸಿ ಅಲ್ಲಿಂದ ಬರುತ್ತಾರೆ ಹಂದರದಲ್ಲಿ ಆ ಟೊಂಗೆಯನ್ನು ಕಟ್ಟಿ ಪೂಜೆ ಮಾಡುತ್ತಾರೆ ಆಮೇಲೆ ಅದನ್ನು ಹಾಲುಗಂಬ ಎಂದು ಕರೆಯುತ್ತಾರೆ.

### ವಧು ವರರನ್ನು ಹಂದರಕ್ಕೆ ಕರೆತರುವ ಶಾಸ್ತ್ರ :

ಹೆಣ್ಣಿನವರು ವಧುವಿಗೆ ಶಾಲನ್ನು ಹೊದಿಸಿಕೊಂಡು ಸೋಬಾನ ಹಾಡುತ್ತಾ ಹಂದರಕ್ಕೆ ಬರುತ್ತಾರೆ ಇತ್ತ ವರನಿಗೂ ಕರೆತಮದೂ ಹಂದರದ ಮದ್ಯದಲ್ಲಿ ನಿಲ್ಲಿಸುತ್ತಾರೆ ಹೆಳವ

ಸಮುದಾಯದ ಹಿರಿಯರು ವಧು ವರರಿಗೆ ಮಧ್ಯದಲ್ಲಿ ಕೂಡಿಸಿ ಕರಿಮಣಿ ಪೂಣಿಸಲಿಕ್ಕೆ ಕೊಡುತ್ತಾರೆ ಅವರು ಕರಿಮಣಿ ಪೋಣಿಸಿ ಮತ್ತೇ ಸಮುದಾಯದ ಹಿರಿಯನ ಕೈಯಲ್ಲಿ ಕೊಡಬೇಕಾಗುತ್ತದೆ.

ನೂಲು ಸುತ್ತುವ ಕಾರ್ಯ :

ಹಂದರದ ಮಧ್ಯದಲ್ಲಿ ನೀರು ತುಂಬಿದ ಐದು ತಂಬಿಗೆಗಳನ್ನು ಇಡುತ್ತಾರೆ ಐದು ಜನಿರಗೆ ಒಂದೊಂದು ತಂಬಿಗೆಗಳ ಹತ್ತಿರ ಕೂಡಿಸುತ್ತಾರೆ ಆ ಮೇಲೆ ಅವರಲ್ಲಿಯೇ ತಂಬಿಗೆಯಲ್ಲಿಯೇ ನೂಲಿನ ಉಂಡಿಯನ್ನು ಸುತ್ತಲೂ ಹಚ್ಚುತ್ತಾರೆ ಅವನು ಬಲಗಡೆಯಿಂದ ನೂಲು ಸೂತ್ತಲು ಪ್ರಾರಂಭಿಸುತ್ತಾರೆ ಐದೂ ಜನರು ನೂಲನ್ನು ತಣಬಿಗೆಗೆ ಏಳು ಸುತ್ತು ಹಾಕುತ್ತಾರೆ.ಅದರಂತೆ ಮುತ್ತೈದೆಯರು ಐದು ಜನ ಸುತ್ತುತ್ತಾರೆ ಅಲ್ಲಿಂದ ವದುವರರಿಗೆ ಐದು ಸುತ್ತು ಸುರಗಿ ಸುತ್ತು ಮೊದಲಿಗ ವರ ಒಂದು ಎಲೆ ಅಡಿಕೆ ಸುರಗಿ ಬಳಿಯಿಟ್ಟು ನಮಸ್ಕರಿಸಿ ಬಲಗಾಲು ಒಳಗಿಟ್ಟು ಪ್ರವೇಶಿಸುತ್ತಾನೆ ಅದೇ ರೀತಿ ವಧು ಪ್ರವೇಶಿಸುತ್ತಾಳೆ ವದುವರಿಬ್ಬರೂ ಮನೆಯ ಮೇಲೆ ಕೂಡುತ್ತಾರೆ ವಧು ವರರ ತಾಯಿ ಮತ್ತು ನಾಲ್ಕೈದು ಮುತ್ತೈದೆಯರು ಅವರ ಹತ್ತಿರ ನೀತಿರುತ್ತಾರೆ ವಧುವರರಿಗೆ ಕಾಲಿಗೆ ಕೈಯಗೆ ಮುಖಕ್ಕೆ ಅರಿಷಿಣ ಹಚ್ಚಿ ಸ್ನಾನ ಮಾಡಿಸುತ್ತಾರೆ ವಧು ವರರ ಹಿಂದೆ ನಿಂತಿರುವ ತಾಯಿಯರಿಗೂ ಎರಡು ಹೊಸಬಟ್ಟೆ ಕೊಡುತ್ತಾರೆ ವಧುವರರಿಗೆ ಹಂದರದಲ್ಲಿ ಹೊಸಬಟ್ಟೆ ತೊಡಸಿ ಆಭರಣ ಹಾಕುತ್ತಾರೆ ಹೆಳವ ಸಮುದಾಯದ ಹಿರಿಯರು ನೂಲು ಸುತ್ತಿದ ತೆಗೆದು ಅದನ್ನು ಅರಿಷಿಣ ದ್ರವ್ಯದಲ್ಲಿ ಅದ್ದಿ ನೂಲಿನ ಜೊತೆ ಒಂದೋಂದು ಅರಿಷಿಣ ಕೊಂಬ ಕಟ್ಟಿ ವಧು ವರರ ಕೈಗಳಿಗೆ ಕಂಕಣ ಕಟ್ಟುತ್ತಾನೆ.

ಅಕ್ಷಿತೆಯ ಕಾರ್ಯ ;-

ಪುರೋಹಿತ ಸಮ್ಮುಖದಲ್ಲಿ ವಧು ವರರು ಹಸಗಟ್ಟೆಯ ಮೇಲೆ ಕುಳಿತು ವಧುವಿನ ಕೈಯಲ್ಲಿ ಪಟ್ಟದ ಗಂಟು ಕಟ್ಟುತ್ತಾರೆ ಪುರೋಹಿತ ಮಂತ್ರ ಉಚ್ಚಾರಣೆಯ ನಂತರ ವರನು ವಧುವಿಗೆ ತಾಳಿ ಕಟ್ಟುತ್ತಾನೆ ಆಗ ಎಲ್ಲ ಬಂದು ಬಾಂದವರು ಅಕ್ಷತೆ ಹಾಕುತ್ತಾರೆ ಆಮೇಲೆ ಸಾಮೋಹಿಕವಾಗಿ ಎಲ್ಲರೂ ಸಿಹಿ ಊಟ ಮಾಡುತ್ತಾರೆ.ಕೆಲವರು ವಧು ವರರ ಹೆಸರು ಕೇಳುವುದುಂಟು ನವದಂಪತಿಗಳ ನಡುವೆ ಹುಡುಗಾಡರ ಮನರಂಜನೆಯ ಕೆಲವು ಆಟಗಳನ್ನು ಆಡಿಸುತ್ತಾರೆ ಆಮೇಲೆ ನವದಂಪತಿಗಳಿಗೆ ಮನೆಯೊಳಗೆ ಕರೆದುಕೊಂಡು ಹೋಗಿ ಊಟ ಮಾಡಿಸುತ್ತಾರೆ ಹೀಗೆ ವಿಶಿಷ್ಠ ಕಾರ್ಯಕ್ರಮದೊಂದಿಗೆ ಮದುವೆ ಕಾರ್ಯ ಮುಕ್ತಾಯವಾಗುತ್ತದೆ.

ಹಿಂದಿನ ಕಾಲದಲ್ಲಿ ಹೆಳವರಲ್ಲಿ ನಡೆಯುತ್ತಿದ್ದ ಮದುವೆಯ ಸಂಪ್ರದಾಯಾಚರಣೆಗಳು ಈಗ ಕೆಲವು ಬದಲಾವಣೆಗಳು ಆಗಿದ್ದರು ಮೂಲ ಸ್ವರೂಪ ಒಂದೆ ಆಗಿರುವುದನ್ನು ಗುರುತಿಸಬಹುದು ಹೆಳವ ಸಮುದಾಯಗಳಲ್ಲಿ ಸಾಕ್ಷರರ ಸಂಖ್ಯೆ ಕಡಿಮೆ ಇರುವುದರಿಂದ ಇನ್ನು ಅಲೆಮಾರಿಗಳಾಗಿಯೇ ಬದುಕನ್ನು ಕಳೆಯುತ್ತಿರುವುದರಿಂದ ಬಾಲ್ಯ

ವಿವಾಹಗಳ ಸಂಖ್ಯೆ ಅತಿಯಾಗಿ ಕಂಡು ಬರುತ್ತದೆ ಈಗ ಹಿಂದಿನ ಕಾಲದಲ್ಲಿದ್ದ ತೆರವು ಮರೆಯಾಗಿ ವರದಕ್ಷಣೆ ಕಾಣಿಸಿಕೊಂಡಿದೆ ಮೂರುದಿನಗಳು ನಡೆಯುತ್ತಿದ್ದ ಮದುವೆ ಸಮಾರಂಭಗಳು ಆಧುನಿಕತೆಗೆ ಮಾರುಹೋಗಿ ಒಂದೇ ದಿನದಲ್ಲಿ ಮುಗಿಯುತ್ತಿರುವುದು ಶೋಚನಿಯೇ ಸಂಗತಿಯಾಗಿದೆ.

ಹಬ್ಬ ಹರಿದಿನಗಳು :

ಹಬ್ಬ ಎನ್ನುವ ಪದ ಎನ್ನುವ ಮೂಲತಃ ಪರ್ವಶಬ್ದದ ತದ್ಭವಾಗಿದ್ದು ನಮ್ಮ ಜನಾಂಗಿಕ ಜೀವನದ ನಿರ್ದಿಷ್ಠ ಕಾಲದ ಉತ್ಸವಕ್ಕೆ ಸಂಕೇತವಾಗಿದೆ ಪರ್ವ ಎಂದರೆ ಕಾಲ ವಿಭಜನೆ ತಿಂಗಳ ಮೊದಲ ಅರ್ಧಾವಧಿಯೊಳಗೆ ಚಂದ್ರನಲ್ಲಿ ಉಂಟಾಗುವ ನಾಲ್ಕು ಬದಲಾವಣೆಗಳ ಕಾಲ ವಿಶೇಷತಃ ಎಂಟನೆಯ ಮತ್ತು ೧೪ ದಿನ ಮಾನವ ಬಯಕೆ ಅಥವಾ ಇಚ್ಚೆಯ ಸಂಕಲ್ಪ ವೃತ್ತ ಆ ಇಚ್ಚೆಯಿಂದ ಪೂರ್ಣತೆಗಾಗಿ ಒಂದು ನಿರ್ಧಿಷ್ಠ ಅವಧಿಯಲ್ಲಿ ಬಲಿ ಅಥವಾ ಅರ್ಪಣೆಕೊಡುವ ಆಚರಣೆ ಒಂದು ಕಾಲಾವಧಿಯಲ್ಲಿ ಕೈಕೊಳ್ಳುವ ಆಚರಣೆಗಳ ರೂಡಿ ಉತ್ಸವಗಳೇ ಹಬ್ಬ ಹೀಗಾಗಿ ಆಚರಣೆಗಳಿಗೂ ಹಬ್ಬಗಳಿಗೂ ಬೇರ್ಪಡಿಸಲಾಗದ ಏರಕ ಆದುದರಿಂದ ಹಬ್ಬಕ್ಕೆ ಸಂಪ್ರದಾಯ ಮತ್ತು ಆಚರಣಗಳೇ ಮೂಲ ಪ್ರೇರಕಾಂಶಗಳು ಶಿಲಾಪೂರ್ವ ಯುಗದ ಪ್ರಾಣಿಮಾನವ ಅನಂತರದ ಬುದ್ದಿ ಮಾನವ ಬುದ್ದಿ ಮಾನವನಿಂದ ನಾಗರಿಕ ಮಾನವ ನಾಗರಿಕತೆಯ ಬೆಳಗು ಈ ವಿವಿಧ ಹಂತಗಳಲ್ಲಿ ನಮ್ಮ ಜನಾಂಗದ ಜೀವನ ವಿಕಾಸಗೊಳ್ಳುತ್ತಾ ಬಂದುದೇ ಒಂದು ರೋಚಕ ಸಾಹಸಮಯ ಸಂಗತಿ ಆದಿ ಮಾನವನಿಂದ ಮೊದಲುಗೊಂಡು ಕಾಲಾನುಕ್ರಮದಲ್ಲಿ ಬೆಳೆದು ಬಂದ ಬೇಟೆ ಹಣ್ಣು ಗಡ್ಡೆ ಗೆಣಸು ಸಂಗ್ರಹ ಕೃಷಿಕೃಮ ಕಲಿಕೆಯ ಮಾಧ್ಯಮಗಳು ಮಾನವನ ಇಟ್ಟು ಸಂಸ್ಕ್ರತಿಯ ಸ್ವರೂಪ ರಚನೆಯ ಆಧಾರದ ವಸ್ತುಗಳು ಮನುಷ್ಯನ ಅಸ್ತಿತ್ವದ ವಿವಿಧ ಹಂತಗಳು ಅವನ ಸಂಸ್ಕ್ರತಿಯ ಬೆಳವಣಿಗೆಯ ಜೊತೆಗೆ ಒಪ್ಪಂದ ಮಾಡಿಕೊಳ್ಳುತ್ತಾ ಪರಿವರ್ತನೆಗೆ ಒಳಗು ಮಾಡಿಕೊಳ್ಳುತ್ತ ಬಂದಿರುವ ಕಥೆಯೇ ಇತಿಹಾಸ ಪೂರ್ವಕಾಲದ ವಿಕಾಸದ ಕಥೆಯಾಗಿದೆ.

ಹಿಂದೂಗಳಲ್ಲಿ ಪ್ರಚಲಿತವಿರುವ ಅನೇಕ ಹಬ್ಬ ಹರಿದಿನಗಳನ್ನು ಹೆಳವ ಸಮುದಾಯಥರು ಅತ್ಯಂತ ವಿಜ್ರಂಭಣೆಯಿಂಥ ಆಚರಿಸುತ್ತಾರೆ ಕಾರ ಹುಣ್ಣಿಮೆ ನಾಗರ ಯುಗಾದಿ ಇವುಗಳು ದೀಪಾವಳಿ ಹೋಳಿ ಮತ್ತು ಪಂಚಮಿ ದಸರಾ ಹೆಳವರು ಆಚರಿಸುವ ಪ್ರಮುಖ ಹಬ್ಬಗಳಾಗಿವೆ.

ಕಾರ ಹುಣ್ಣಿಮೆ :

ಕಾರ ಹುಣ್ಣಿಮೆಯ ದಿವಸ ಧನಕರುಗಳ ಮೈ ತೋಳೆಯುವ ಕೆರೆ ಹಳ್ಳ ಕೊಳ್ಳಗಳಿಗೆ ಒಯ್ಯುತ್ತಾರೆ ಸ್ವಚ್ಚವಾಗಿ ಮೈ ತೊಳೆದು ಮೈಯನ್ನು ಬಟ್ಟೆಯಿಂದ ಒರೆಸುತ್ತಾರೆಧನಗಳ ಕೊಡುಗಳಿಗೆ ವಾರನೆಸ್ ಹಚ್ಚುತ್ತಾರೆ ಮೈಮೇಲೆ ಬಣ್ಣ ಹಚ್ಚುತ್ತಾರೆ ವಿವಿಧ ಬಣ್ಣಗಳಿಂದ ಎತ್ತುಗಳ ಮೇಲೆ ಜೂಲ್ ಹೊದಿಸುತ್ತಾರೆ ಅವುಗಖಳ ಹಣೆಗೆ ಬಾಸಿಂಗ್ ಕಟ್ಟುತ್ತಾರೆ ಅಡಿಗೆ ತಯಾರಾದ ಮೇಲೆ ಧನಗಳಿಗೆ

ನೈವದ್ಯೆ ಹಿಡಿಯುತ್ತಾರೆ ಊಟೋಪಚಾರ ಮುಗಿದ ಬಳಿಕ ಸಾಯಂಕಾಲ ಎಲ್ಲರೂ ಒತ್ತಟ್ಟಿಗೆ ಸೇರಿ ತಮ್ಮ ತಮ್ಮ ಎತ್ತುಗಳನ್ನು ಊರಿನ ತುಂಬ ವಾದ್ಯ ಮೇಳದವರ ಜೊತೆಗೆ ಮರವಣಿಗೆ ತೆಗೆಯುತ್ತಾರೆ ಇದಾದ ಬಳಿಕ ಕರಿ ಹರಿಯುತ್ತಾರೆ.

ನಾಗರ ಪಂಚಮಿ:

ನಾಗರ ಪಂಚಮಿ ನಾಡಿಗೆ ದೊಡ್ಡದು ಎಂದು ಹಿರಿಯರುಹೇಳಿರುವಂತೆ ಈ ಹಬ್ಬವನ್ನು ಹೆಳವರು ಅತ್ಯಂತ ಸಡಗರದಿಂದ ಆಚರಿಸುತ್ತಾರೆ ಹಬ್ಬಕ್ಕೆ ಮುಂಚಿತವಾಗಿ ತಮ್ಮ ಹೆಣ್ಣು ಮಕ್ಕಳು ಗಂಡನ ಮನೆಯಿಂದ ಕರೆದುಕೊಂಡು ಬರುತ್ತಾರೆ ವಿಶೇಷವಾಗಿ ನಾಗರ ಪಂಚಮಿ ಹಬ್ಬ ಹೆಣ್ಣುಮಕ್ಕಳ ಪಡೆದಿದೆ ಹಬ್ಬಕ್ಕೆ ಕಾಲದಿಂದಲೂ ಪ್ರಸಿದ್ದ ಪಡೆದಿದೆ ಈ ಹಬ್ಬಕ್ಕೆ ಬಂದಿರುವ ಹೆಣ್ಣು ಮಕ್ಕಳಿಗೆ ಹೊಸ ಬಟ್ಟೆ ಬಂಗಾರದ ಒಡವೆಗಳನ್ನು ಹೆಣ್ಣೂ ಮಕ್ಕಲಿಗೆ ಕೊಡಿಸುತ್ತಾರೆ ತೌರೂರಿಗೆ ಬಂದಿರುವ ಹೆಣ್ಣು ಮಕ್ಕಳು ತಮ್ಮ ವಾರಿಗೆಯ ಗೆಳತಿಯರೊಂದಿಗೆ ಅಮವಾಸ್ಯೆಯ ದಿವಸ ಜೋಡಿ ಹುತ್ತಗಳ ಹತ್ತಿರ ಅಥವಾ ಅಶ್ವತ ಮರದ ಕಟ್ಟೆಗಳ ಬಳಿ ಹೋಗಿ ಎಳ್ಳು ಹೂ ಕಾಯಿಗಳನ್ನು ಅರ್ಪಿಸಿ ಕೊಬ್ಬರಿ ಬಟ್ಟಲದಿಂದ ಹಾಲೆರೆಯುವರು ಕೆಲವರು ಹುತ್ತಗಳಿಗೆ ಪೂಜೆ ಸಲ್ಲಿಸಿ ಅಲ್ಲಿಂದ ಮಣ್ಣು ತಂದು ನಾಗಮೂರ್ತಿಯನ್ನು ಅಂದವಾಗಿ ಮಾಡಿ ಕುಂಕುಮ ಹಚ್ಚಿ ಹೂ ಕಾಯಿಗಳಿಂದ ಶೃಂಗರಿಸಿ ಹಾಲೆರೆಯುತ್ತಾರೆ ಸಂಜೆ ಬಂದು ಬಳಗದವರು ಕೂಡಿಕೊಂಡು ತಮ್ಮ ತಮ್ಮ ಮನೆಯಲ್ಲಿ ಎಳ್ಳು ಉಂಡೆಗಳನ್ನು ಸಾಮೂಹಿಕವಾಗಿ ತಿನ್ನುತ್ತಾರೆ ಸಂಬಂಧಿಕರ ಮನೆಗಳಿಗೆ ಎಳ್ಳು ಉಂಡಿಗಳನ್ನು ಕಳುಹಿಸುವ ರೂಢಿಯಲ್ಲಿದೆ ಹೆಣ್ಣು ಮಕ್ಕಳು ಜೋಕಾಲಿಯನ್ನು ತಮ್ಮ ವಾರಿಗೆಯ ಗೆಳತಿಯರೊಂದಿಗೆ ಆಡಿ ಸಂತೋಷ ಪಡುತ್ತಾರೆ

ದಸರಾ ಹಬ್ಬ :

ಈ ಹಬ್ಬದ ಸಂದರ್ಭದಲ್ಲಿ ಎಲ್ಲಡೆ ಬನ್ನಿ ಮುರಿಯುವ ಸಂಪ್ರದಾಯ ಹಬ್ಬದ ನಾಲ್ಕೈದು ದಿವಸಗಳ ಮುಂಚೆ ವೃತ್ತಿಗಾಗಿ ಹರಿದು ಹಂಚಿ ಹೋಗಿರುವ ಹೆಲವರು ತಮ್ಮ ತಮ್ಮ ಊರುಗಳಿಗೆ ವಾಪಸ ಬರುತ್ತಾರೆ ಇದೇ ಸಮಯದಲ್ಲಿ ಹಿರೇರ ಹಬ್ಬ ಆಚರಿಸುತ್ತಾರೆ ಆವತ್ತಿನ ಸಮಯದಲ್ಲಿ ತಮ್ಮ ಹಿರಿಯರ ಹೆಸರಿನ ಮೇಲೆ ಮಾಡಿಸಿಟ್ಟಿರುವ ಬೆಳ್ಳಿಯ ಪ್ರತಿಮೆಗಳನ್ನು ಹೊರತೆಗೆದುಅವುಗಳನ್ನು ಗೋಮುತ್ರದಿಂದ ತೊಳೆದು ಕೆಂಪು ಬಟ್ಟೆಯಲ್ಲಿ ಸುತ್ತಿ ಜಗಲಿಯ ಮೇಲೆ ಇಡುತ್ತಾರೆ ಅಂದು ಕೆಲವರುಸಿಹಿ ಅಡುಗೆಯ ನೈವದ್ಯೆ ಹಿಡಿದರೆ ಇನ್ನು ಕೆಲವರು ಕುರಿ ಮೇಕೆಗಳನ್ನು ಬಲಿಕೊಟ್ಟು ಎಡೆ ಹಿಡಿಯುತ್ತಾರೆ ಹಬ್ಬವನ್ನು ಅವರ ಅವರ ಆರ್ಥಿಕ ಸ್ಥಿತಿಗತಿಗಳ ಆಧಾರದ ಮೇಲೆ ಆಚರಿಸುತ್ತಾರೆ ವಿಜಯ ದಶಮಿಯೆಂದು ಹೆಳವರು ತಮ್ಮ ಕಡತಗಳನ್ನು ಹೊರತೆಗೆದು ಹೂ ಕಾಯಿಗಳನ್ನು ಅರ್ಪೀಸಿ ಸಿಹಿಹಿ ಅಡಿಗೆಯ ನೈವದ್ಯೆ ಹಿಡಿಯುತ್ತಾರೆ ಕರಿ ದಿವಸ ಪ್ರತಿಯೊಂದು ಮನೆಗಳಲ್ಲಿ ತಮ್ಮ ಶಕ್ತಿ ದೇವತೆಗಳ ಹೆಸರಿನ ಮೇಲೆ ಬಲಿಕೊಡುತ್ತಾರೆ ಬೀಗರು ಹೆಚ್ಚಿನ ಸಂಖ್ಯೆಯಲ್ಲಿ ಬಂದಿರುತ್ತಾರೆ ೦ದಿನ ರಾತ್ರಿ ಕುಡುಂಬದ ಹಿರಿಯರು ಮತ್ತು

ಬೀಗರು ಸರಾಯಿ ಕುಡಿದು ಸಾಮೂಹಿಕವಾಗಿ ಮೌಂಸಾಹಾರದ ಊಟ ಮಾಡುತ್ತಾರೆ.

ದೀಪಾವಳಿ ;

ಈ ಹಬ್ಬದ ಸಂದರ್ಭದಲ್ಲಿ ಹೆಳವರು ಹೊಸ ಬಟ್ಟೆಗಳಲ್ಲಿ ದರಿಸುತ್ತಾರೆ ಅಮವಾಸ್ಯಯ ದಿನ ಮೈಕೈಗಳಿಗೆ ಎಣ್ಣೆ ಹಚ್ಚಿ ಸ್ನಾನ ಮಾಡುತ್ತಾರೆ ಮುಂಜಾನೆ ಹೆಣ್ಣು ಮಕ್ಕಳು ತಮ್ಮ ಸಹೋದರರಿಗೆ ಹಾಗೂ ತಂದೆಗೆ ಮನೆಯ ಮೇಲೆ ಕೂಡಿಸಿ ಆರತಿ ಬೆಳಗುತ್ತಾರೆ ಮೂರು ದಿನಗಳವರೆಗೆ ಮನೆಗಳ ಹೊರಗಡೆ ಮತ್ತು ಚಪ್ಪರಗಳಲ್ಲಿ ರಸ್ತೆಯ ಎರಡು ಬದಿಗಳಲ್ಲಿ ದೀಪ ಹಚ್ಚಿರುತ್ತಾರೆ ಅಮವ್ಯಾಸೆಯ ರಾತ್ರಿ ಲಕ್ಷ್ಮೀ ಪೂಜೆ ಮಾಡುತ್ತಾರೆ.

ಹೋಳಿ ಹಬ್ಬ :

ಸಾಮಾನ್ಯವಾಗಿ ಎಲ್ಲ ಹಬ್ಬಗಳಿಗಿಂತ ಈ ಹಬ್ಬವನ್ನು ಹೆಳವರು ಸಡಗರದಿಂದ ಆಚರಿಸುತ್ತಾರೆ ಫಾಲ್ಗುಣದ ಕೋರೆ ಚಂದ್ರನನ್ನು ಕಾಣುವುದೆಂದರೆ ಇವರಿಗೆ ಅತೀವ ಸಂತೋಷ ಕೋರೆ ಚಂದ್ರನನ್ನು ಕಂಡು ಕೈ ಬಾಯಿಗಳಿಂದ ಸ್ವಾಗತಿಸುವರು ಹದಿನೈದು ದಿನಗಳವರೆಗೆ ಓಣಿಯಲ್ಲಿ ಜನಪದ ಹಾಡುಗಳ ಸುರಿಮಳೆ ರಾತ್ರಿ ವೇಳೆಯಲ್ಲಿ ಕುಳ್ಳ ಕಟ್ಟಿಗೆ ಗಳನ್ನು ಕಳುವು ಮಾಡಿ ಒಂದು ಜಾಗದಲ್ಲಿ ಇಡುತ್ತಾರೆ ಹುಣ್ಣಿಮೆಯ ದಿನ ಯುವಕರು ಕಾಮಣ್ಣನ ಪ್ರತಿಕೃತಿ ತಂದು ಅದನ್ನು ಕಾಮದಹನ ಮಾಡುವ ಜಾಗದಲ್ಲಿ ಇಡುತ್ತಾರೆ ಆಮೇಲೆ ಅದಕ್ಕೆ ಬೆಂಕಿ ಇಡುತ್ತಾರೆ ಉರಿಯುತ್ತಿರುವ ಬೆಂಕಿಗೆ ತಮ್ಮ ನೆಚ್ಚಿನ ವಸ್ತುಗಳನ್ನು ಎಸೆಯುತ್ತಾರೆ ಹೊಯ್ಕೋಳುತ್ತಾರೆ ಆಮೇಲೆ ಎಲ್ಲರೂ ಕೂಡಿಕೊಂಡು ಊರ ಕಡೆಗೆ ಬರುತ್ತಾರೆ ಕರಿ ದಿವಸ ಬಲಿಕೊಡುತ್ತಾರೆ ಕೆಲವರು ಬಣ್ಣ ಆಡುತ್ತಾರೆ ಹೆಣ್ಣು ಗಂಡು ಎಂಬ ಬೇದ ಭಾವವಿಲ್ಲದೆ ಬಣ್ಣ ಆಡುತ್ತಾರೆ.

ಯುಗಾದಿ :

ಯುಗಾದಿ ಹಬ್ಬವನ್ನುಎರಡು ದಿನಗಳ ಕಾಲ ಊರಿನ ಜನರೆಲ್ಲರೂ ಒಗ್ಗಟ್ಟಿನಿಂದ ಆಚರಿಸುತ್ತಾರೆ ಹಬ್ಬದ ಮುಂಚಿತವಾಗಿಯೇ ಬಂಧು ಬಾಂಧವರಿಗೆಲ್ಲಾ ಬರಲು ಕರೆಕೊಟ್ಟರುತ್ತಾರೆ.ಮೊದಲನೆ ದಿನ ಮನೆ ಮಂದಿಯೆಲ್ಲಾ ಎಣ್ಣೆ ಹಚ್ಚಿಕೊಂಡು ಎರೆಯುತ್ತಾರೆ ಆವತ್ತು ಬಸವಣ್ಣನ ಮೈ ತೊಳೆದು ಪೂಜೆ ಮಾಡುತ್ತಾರೆ ಹೊಸ ಬಟ್ಟೆಗಳನ್ನು ತೊಟ್ಟುಕೊಂಡು ಮನೆ ಮನೆಹೆ ಹೋಗಿ ಬೇವು ಬೆಲ್ಲ ಕೊಟ್ಟು ಹಿರಿಯರ ಕಾಲಿಗೆ ಬಿದ್ದು ಆರ್ಶಿವಾದ ಪಡೆಯುತ್ತಾರೆ ಸಂದರ್ಭದಲ್ಲಿ ಅಗಲಿ ಹೋದವರ ಹಡಸರಿನ ಮೂಡಿಸಿಟ್ಟರುವ ಬೆಳ್ಳಿಯ ಅಥವಾ ಕಂಚಿನ

ಪ್ರತಿಮೆಗಳನ್ನು ಹೊರತೆಗೆದು ಗೋಮಂತ್ರದಿಂದ ತೊಳೆದು ಜಗಲಿಯ ಮೇಲಿಡುತ್ತಾರೆ ಆಮೇಲೆ ಹಿರಿಯರ ಮೇಲೆ ಕುರಿಯನ್ನು ಬಲಿಕೊಟ್ಟುಮೌಂಸಾಹಾರದ ಅಡುಗೆ ಮಾಡಿ ನೈವದ್ಯೆ ಹಿಡಿಯುತ್ತಾರೆ ಸಾಯಂಕಾಲ ಬಂದು ಬಳಗದವರಿಗೂ ಕೊಟಕೊಂಡು ಸಾಮೂಹಿಕವಾಗಿ ಊಟ ಮಾಡುತ್ತಾರೆ.

ವೇಷಭೂಷಣಗಳು :

ಸಾಮಾನ್ಯವಾಗಿ ಹೆಳವ ಸಮುದಾಯದವರು ವೇಷಭೂಷಣ ಮಾಡಿಕೊಳ್ಳುವುದರಿಂದ ಅವರ ವರ್ಚಸ್ಸು ಹೆಚ್ಚುತ್ತದೆ ಎಲ್ಲಾ ಹೆಳವ ಸಮುದಾಯದವರು ಉದ್ದವಾದ ಅಂಗಿ ಮತ್ತು ದೋತರ ತಲೆಯೇ ಟೋಪಿಗೆ ಅಥವಾ ಪಟಗಾ ಸುತ್ತಿಕೊಳ್ಳುತ್ತಿದ್ದರು ಹಣೆಯ ಮೇಲೆ ವಿಭೂತಿಯನ್ನು ಹಚ್ಚಿಕೊಳ್ಳುತ್ತಾರೆ ಹೆಗಲ ಮೇಲೆ ಕೆಂಪು ಶಾಲು ವಹಿ ನಾಲ್ಕು ದೋತರು ಇರುತ್ತೆವೆ ಎಲ್ಲಾ ಹೆಳವರು ಒಂದೇ ರೀತಿಯಾದ ವೇಷಭೂಷಣ ಹೊಂದಿರುತ್ತಾರೆ ಸ್ತ್ರೀಯರು ಸೀರೆ ಕುಪ್ಪಸ ಹಣೆಯ ಮೇಲೆ ಕುಂಕುಮ ಕೈ ತುಂಬಿ ಬಳೆ ಮತ್ತು ಹಣೆಯ ಮೇಲೆ ಹಂಚಿ ಬಟ್ಟು ಇಟ್ಟಿರುತ್ತಾರೆ ಒಟ್ಟಿನಲ್ಲಿ ಹೆಳುವುದಾದರೆ ಹೆಳವರ ವೇಷಭೂಷಣಗಳು ಇತರರಿಗಿಂತ ಭಿನ್ನವಾಗಿರುತ್ತವೆ.

ಅಡಿ ಟಿಪ್ಪಣಿಗಳು

೧. ಡಾ॥ ಹರಿಲಾಲ ಪವಾರ ಹೆಳವರ ಸಂಸ್ಕೃತಿ ಪುಟ ೩೩ ೧೯೯೩,

೨. ಶ್ರೀ ಅಡಿವೆಪ್ಪ ಸಿದ್ದಪ್ಪ ಹೆಳವರ ಸಾ: ಪರಮಾನಂದವಾಡಿ, ಇವರಿಂದ ಕೇಳಿ ಪಡೆದ ಮಾಹಿತಿ.

೩. ಶ್ರೀಮತಿ ಮಹಾದೇವಿ ಬಾಳಪ್ಪ ಹೆಳವರ ಸಾ: ಪರಮಾನಂದವಾಡಿ, ಇವರಿಂದ ಕೇಳಿ ಪಡೆದ ಮಾಹಿತಿ



# ಅಧ್ಯಾಯ ೫

## ಸ್ಥಳಿಯ ಚರಿತ್ರೆಯಲ್ಲಿ ಹೆಳವರ ಪಾತ್ರ

ಸ್ಥಳಿಯ ಚರಿತೆಯನ್ನು ನಿರ್ಮಿಸುವಲ್ಲಿ ಹೆಳವರ ಪಾತ್ರ ಮಹತ್ರವಾದದ್ದು ಹೆಳವರು ತಮ್ಮ ಬಳಿಇರುವ ಕಡತಗಳಲ್ಲಿ ಒಕ್ಕಲು ಮನೆಯವರ ವಂಶವೃಕ್ಷ ಬರೆದುಕೊಳ್ಳುತ್ತಾರೆ ಅದಕ್ಕೆ ಚಪ್ಪೋಡು ದಾಖಲೆ ವಹಿ ಯಾದಿವಂಶಾವಳಿ ದಪ್ತರ ಜಾಡಿ ಈ ಹೆಸರುಗಳಿಂದ ಕರೆಯುತ್ತಾರೆ.

ಹೆಳವರು ತಮ್ಮ ಬಳಿ ಇರುವ ಕಡತಗಳನ್ನು ತೋರಿಸುತ್ತ ಇದು ನಮ್ಮ ತಾತ ಮುತ್ತಾತರ ಕಾಲದಿಂದ ಬಂದಿದ್ದು ಎನ್ನುತ್ತಾರೆ ಕಡತಗಳು ಅಥವಾ ಹಿಗಳ ಆಧಾರದಿಂದಲೇ ಒಕ್ಕಲು ಮನೆಗಳ ವೃಂಶ ವೃಕ್ಷ ಹೇಳುತ್ತಾರೆ ಕಡತಗಳಲ್ಲಿ ಬರೆದುಕೊಂಡಿರುವ ದಾಖಲೆಗಳು ಒಕ್ಕಲು ಮನೆಗಳ ಇತಿಹಾಸದ ವಂಶವೃಕ್ಷ ಹೇಳಲು ಮಾತ್ರ ಸಿಮೀತವಾಗಿರದೇ ಅದು ನಾಡಿನ ಐತಿಹಾಸಿಒಕ ಘಟನೆ ಸಮಾಜಿಕ ಆರ್ಥಿಕ ಮತ್ತು ಜನ ಸಮೂಹಗಳು ಮೂಲ ಒದಗಿಸುವಲ್ಲಿ ಮಹತ್ವ ಪಡೆದಿವೆ ಮಾತ್ರವಲ್ಲ ಜನರ ಹೊಲ ಮನೆ ಆಸ್ತಿಗಳು ಇತ್ಯಾದಿಗಳ ಸಂಬಂದ ತಂಟೆ ತಕರಾರು ಬಂದಾಗ ಕುಲಕರ್ಣಿ ಗೌಡ ಮುಂತಾದವರಾ ಖೈರು ನಮೂದುಗಳಿಗಾಗಿ ಹೆಳವರ ಕಡತಗಳು ನೆರವು ಪಡೆದ ಉದಾಹರಣೆಗಳು ಈಗಲೂ ಉಂಟು.

ಕಡತ ಅಥವಾ ವಹಿಯ ಮುಖ ಪುಟದ ಮೇಲೆ ವಿಭೂತಿ ಕುಂಕುಮ ಹಚ್ಚುತ್ತಾರೆ ಕೆಳಗಡೆ ತಮ್ಮ ಹೆಸರಿರುತ್ತದೆ ಕೆಲವರು ಸ್ವಸ್ತಿಕ ಚಿಹ್ನೆ ತೆಗೆದುರುತ್ತಾರೆ ಒಳಗಡೆಯ ಪುಟದಲ್ಲಿ ವಂಶವೃಕ್ಷ ಬರೆದಿರುತ್ತಾರೆ ಮೇಲ್ಭಾಗದಲ್ಲಿ ಓಂ ಶ್ರೀ ಗುರುಪ್ರಸನ್ ಶಾಲಿವಾಹನ ಶಕೆ ೧೧೨೬ ಹಿಜ್ರಿ ೭೮೦ ಹುಟ್ಟಿದ್ದು ಯಾದಿವಂಶಾವಳಿ ಎಂದು ಆರಂಬಿಸಿರುತ್ತಾರೆ ಅನೇಕ ಹೆಳವರ ಕಡತಗಳನ್ನು ವೀಕ್ಷೀಸಿದಾಗ ಅದರಲ್ಲಿ ಮೇಲಿನಂತೆ ಬರೆದಿರುತ್ತಾರೆ ಇದು ಹೆಳವರು ತಮ್ಮಲ್ಲಿಯೇ ಮಾಡಿಕೊಂಡ ಯೋಜನೆಯೇ ತಿಳಿಯದು ಪ್ರತಿಯೊಂದು ಮನೆಯ ವೃಂಶವೃಕ್ಷ (ಹೆಳುವಾಗ) ಬರೆಯುವಾಗ ಉದಾ ದೊಡ್ಡನಾಗನಗೌಡ ಸಣ್ಣ ನಾಗನಗೌಡ ಈ ರೀತಿ ಬರೆದಿರುತ್ತಾರೆ ಹೆಣ್ಣು ಮಕ್ಕಳ ಹೆಸರುಗಳು ಸಾಮಾನ್ಯವಾಗಿ ಗಂಗಮ್ಮ ಗೌರಮ್ಮ ಗೌಡತಿ ಎಂದು ಇರುತ್ತದೆ ಜೊತೆಗೆ ಯಾವುದಾದರೂ ಹೊಳೆಯನ್ನು ದಾಟಿ ಬಂದರು ಎಂದು ಹೇಳುತ್ತಾರೆ.

ಕೆಳುಗರಿಗೆ ವಿಸ್ಮಯ ಉಂಟಾಗುವಂತೆ ಹೆಲವರು ಕೆಲವು ಮಾಹಿತಿಗಳನ್ನು ಸ್ವತಃ ತಾವೇ ಸೃಷ್ಟಿಸಿ ಅದರ ಬಗ್ಗೆ ಆಸಕ್ತಿ ಉಂಟಾಗುವಂತೆ ಮಾಡುತ್ತಾರೆ ತಮ್ಮ ಕಡತಗಳಲ್ಲಿರುವ

ವಂಶವೃಕ್ಷವನ್ನು ಇತರರಿಗೆ ಬರೆದು ಕೊಡುವುದಿಲ್ಲೇಕೆಂದರೆ ಈ ವೃಂಶವೃಕ್ಷದ ಆಧಾರದಿಂದ ಬೇರೊಬ್ಬ ಹೇಳುವನ್ನು ತನ್ನ ಕಡತಗಳಲ್ಲಿ ಸರ್ವಮಾಹಿತಿ ಬರೆದುಕೊಂಡು ಕಂಠಪಾಠ ಮಾಡಿ ಸಂಬಂಧ ಪಟ್ಟ ಒಕ್ಕಲು ಮನೆಯವರ ಮುಂದೆ ಕುಲಕೊಂಡಾಡಿ ಕಾಳುಕಡ್ಡಿ ಇತ್ಯಾದಿಗಳನ್ನು ಪಡೆದುಕೊಂಡು ಹೋಗಬಹುದು ಹೀಗೆ ಆದ ಕೆಲವೂ ಉದಾಹರಣೆಗಳನ್ನು ಸ್ವತಃ ಹೆಳವರೇ ಹೇಳುತ್ತಾರೆ ಈ ಉದ್ದೇಶದಿಂದ ಕಡತಗಳಿರುವ ವಿಷಯಗಳು ಇತರರಿಗೆ ಕೊಡುವುದಿಲ್ಲ ಕಡತಗಳನ್ನು ಬಹಳ ಜಾಗರೂಕತೆಯಿಂದ ಕಾಯತದಿಟ್ಟಿರುತ್ತಾರೆ.

ಕಡತಗಳನ್ನು ಸಾಮಾನ್ಯವಾಗಿ ಕನ್ನಟಡ ತರೆಲಗು ಮರಾಠಿ ಹೀಗೆ ಆಯಾ ರಾಜ್ಯದ ಮಾತೃಭಾಷೆಯಲ್ಲಿ ಬರೆದಿರುತ್ತಾರೆ ಹೆಚ್ಚಾಗಿ ಮೋಡಿ ಅಕ್ಷರಗಳನ್ನು ಅತಿ ಹೆಚ್ಚಾಗಿ ಬಳಸುತ್ತಿದ್ದರು ಅದರ ಇತ್ತೀಚಿಗೆ ಹೆಳವರು ಕನ್ನಡದಲ್ಲಿ ವಂಶಾವಳಿಬರೆಯುತ್ತಾನೆ ಹೆಳವರಲ್ಲಿ ಕನಿಷ್ಟ ಪಕ್ಷ ಕಡತವನ್ನು ಬರೆಯುವ ಮಟ್ಟಿಗಾದರೂ ಅಕ್ಷರ ಜ್ಞಾನ ಇರುತ್ತದೆ ಹೆಚ್ಚಾಗಿ ತಂದೆ ಮಗನಿಗೆ ಅಕ್ಷರ ಜ್ಞಾನ ಮಾಡಿಕೊಡುತ್ತಾನೆ.ಇವರು ವರ್ಷದ ಉದ್ದಕ್ಕೂ ತಮ್ಮ ಕುಲ ವೃತ್ತಿಗಾಗಿ ಗುರು ಕೆಲವಂತರೂ ಮರಳಿನ ಅಕ್ಷರದ ಜ್ಞಾನ ಮಾಡಿಕೊಡುತ್ತಾರೆ ಹಳೆಯ ತಲೆಮಾರಿನ ಕಡತಗಳು ಹೆಚ್ಚಾಗಿ ಮೋಡಿ ಬರಹದಲ್ಲಿಯೆ ಇರುತ್ತೇವೆ ಮನೆಗಳ ವಂಶವೃಕ್ಷ ಕಂಠಪಾಠ ಮಾಡಿರುತ್ತಾರೆ ಅಡೆತಡೆಯಿಲ್ಲದೇ ಸಲಿಸಾಗಿ ಕುಲ ಕೊಂಡಾಡುತ್ತಾರೆ.

ಹೆಳವರು ಸುಮಾರು ತಲೆಮಾರುಗಳಿಂದ ಇದೇ ವೃತ್ತಿಯನ್ನು ನಿಷ್ಠೆ ಪ್ರಾಮಾಣಿಕತೆಯಿಂದ ಮಾಡಿಕೊಂಡು ಇದೇ ಪ್ರತಿಯೊಂದು ಊರಿನ ಮನೆತನಗಳ ಆಡಳಿತ ಸಂಸ್ಕ್ರತಿಗಳನ್ನು ಹಾಗೂ ಅಣ್ಣ ತಮ್ಮಂದಿರ ಆಸ್ತಿ ಕಲಹಗಳನ್ನು ಬಗೆಹರಿಸುವದರಲ್ಲಿ ಸ್ಥಳಿಯವಾಗಿ ಹೆಳವರು ಇಂದಿಗೂ ಪ್ರಮೂಖ ಪಾತ್ರ ವಹಿಸುತ್ತಾರೆ.



# ಅಧ್ಯಾಯ – ೬

## ಸಮಾರೋಪ :–

ಈ ಕೃತಿಯಲ್ಲಿ ಹೆಳವರ ಬದಿಕಿನ ಕೆಲವು ವಿಷಯಗಳ ಸ್ಥೂಲ ಪರಿಚಯ ಅವಲೋಕಿಸಿದಂತಾಯಿತು ಅಲೆಮಾರಿಯಿಂದ ಅರೆ ಅಲೆಮಾರಿಯಾಗಿ ಊರಿಂದೊಂದಿರಿಗಡೆ ಹೋಗಿ ತಮ್ಮ ಒಕ್ಕಲು ಮನೆಗಳ ಕೊಂಡಾಟ ಅವರಿಂದ ಸಂಭಾವಣೆಯಾಗಿ ಕಾಳುಕಡ್ಡಿ ಬಟ್ಟೆ ಬರೆ ಧನಕನಕ ದನಕರುಗಳ ಇತ್ಯಾದಿಗಳನ್ನು ಪಡೆದುಕೊಂಡು ಬರುವ ಹೆಳವರ ಸ್ಮರಣ ಶಕ್ತಿ ಅಗಾಧವಾದದ್ದು ಮೊದಲಿನಿಂದಲೂ ಗೌಡ ಕುಲಕರ್ಣಿ ದೇಶಮುಖ ಇನಾಂದಾರ ಜಹಗೀರದಾರ ರೆಡ್ಡಿ ಗಾಣಿಗರು ಮುಸ್ಲಿಂರು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದವರು ಹೀಗೆ ಕರ್ನಾಟಕದ ಹಲವಾರು ಕೃಷಿಕ ಗುಂಪು ಮತ್ತು ಬುಡಕಟ್ಟುಗಳ ಮನೆತನದ ಮಹತ್ತರ ಮಾಹಿತಿಗಳನ್ನು ತಮ್ಮ ಕಡತ (ವಹಿ)ಗಳಲ್ಲಿ ಜೋಪಾನವಾಗಿಟ್ಟು ಕೊಂಡಿರುತ್ತಾರೆ.

ಪ್ರಸ್ತೂತ ಸನ್ನಿವೇಶದಲ್ಲಿ ಕುಲ ವೃತ್ತಾಂತ ಕೇಳುವ ಅಭಿರುಚಿ ಅಥವಾ ತಾಳ್ಮೆ ಈವತ್ತಿನ ಆಧುನಿಕ ಸಮಾಜದ ಜನರಲ್ಲಿ ಉಳಿದಿಲ್ಲ ಹೆಳವರನ್ನು ಬಿಕ್ಷುಕರಂತೆ ಕಾಣುವ ಮನೋಭಾವ ಕೆಲವರಲ್ಲಿ ಬಂದಿದೆ ಒಂದು ಕಾಲದಲ್ಲಿ ಹೆಳವರು ಇದ್ದ ಮನೆತನ ಹಿರಿಯ ಸಂಪ್ರದಾಯಸ್ಥರ ಮನೆತನವೆಂದೂ ಹೆಳವರಿಲ್ಲದ ಮನೆತನ ಗೌರಸ್ಥರ ಮನೆತನ ಅಲ್ಲವೆಂದೂ ಜನರಲ್ಲಿ ನಂಬಿಕೆ ಇತ್ತು.

ಬಡತನ ಅನಕ್ಷರತೆ ದಾರಿದ್ರ್ಯದಲ್ಲಿ ಬೆಂದು ಹೋಗಿರುವ ಹೆಳವರು ಸಾಮಾಜಿಕವಾಗಿ ಆರ್ಥಿಕವಾಗಿ ರಾಜಕೀಯವಾಗಿ ಶೈಕ್ಷಣಿಕವಾಗಿ ಬಹಳಷ್ಟು ಹಿಂದೂಳಿದ್ದಾರೆ ಅದ್ಯಾಕೋ ಈವತ್ತಿನ ಆಧುನಿಕ ಯುಗದಲ್ಲಿ ಕಂಪ್ಯೂಟರ ಕ್ರಾಂತಿಯಲ್ಲಿ ಕೂಡಾ ತಮ್ಮ ಸಂಪ್ರದಾಯ ಸಂಸ್ಕೃತಿ ಆಚಾರ ವಿಚಾರಗಳನ್ನು ಅತ್ಯಂತ ನಿಷ್ಠೆ ಪ್ರಾಮಾಳಕತೆಯಿಂದ ಹಾಗೂ ಕಟ್ಟು ನಿಟ್ಟಾಗಿ ಪಾಲಿಸುತ್ತಾ ಬರುತ್ತಿದ್ದಾರೆ ಹೆಳವರು ಆರ್ಥಿಕ ಮತ್ತು ವಿದ್ಯಾಭ್ಯಾಸದ ಕ್ಷೇತ್ರಗಳಲ್ಲಿ ಪ್ರಗತಿ ಹೊಂದಬೇಕು ರಾಜಕೀಯ ರಂಗದಲ್ಲಿ ಹೆಳವರಿಗೆ ಅವಕಾಶ ದೊರಯಬೇಕು ಆರ್ಥಿಕ ಮುಗ್ಗಟ್ಟು ಸ್ವಲ್ಪ ಮಟ್ಟಿಗಾದರೂ ಸುಧಾರಣೆ ಆಗಬಹುದು.

ಹೆಳವರ ಬಳಿ ಇರುವ ಕಡತ (ವಹಿ)ಗಳು ಆಧಾರದಿಂದಲೇಒಕ್ಕಲು ಮನೆಗಳ ವಂಶವೃಕ್ಷ ಐತಿಹಾಸಿಕ ಚರಿತ್ರ ಇತ್ಯಾದಿ ಸಂಗತಿಗಳನ್ನು ಹೇಳುತ್ತಾರೆ ತಮ್ಮ ಬಳಿ ಇರುವ ಕಡತಗಳಲ್ಲಿ

ಬರೆದುಕೊಂಡು ದಾಖಲೆಗಳು ಒಕ್ಕಲು ಮನೆಗಳ ವಂಶ ವೃಕ್ಷಕ್ಕೆ ಮಾತ್ರ ಸೀಮಿತವಾಗಿರದೇ ನಾಡಿನ ಐತಿಹಾಸಿಕ ಘಟನೆ ಆರ್ಥಿಕ ಸಾಮಾಜಿಕ ಹಾಗೂ ಜನ ಸಮೂಹಗಳ ಮೂಲವನ್ನು ಒದಗಿಸುವಲ್ಲಿ ಮಹತ್ವ ಪಡೆದಿವೆ ಜನರ ಆಸ್ತಿ ಪಾಸ್ತಿ ವಿವರ ಹಂಚಿಕೆಗಳ ಸಂಬಂದ ನ್ಯಾಯ ಬಂದಾಗ ಶಾನುಭೋಗ ಪಟೇಲ ಮುಂತಾದವರು ದಾಖಲೆಹಗಳಿಗಾಗಿ ಹೆಳವರ ಕಡತಗಳ ನೆರವೂ ಪಡೆದ ಉದಾಹರಣೆಗಳನ್ನು ಹೇಳಲಾಗುತ್ತದೆ. ಕೆಲವರ ಬಳಿ ಇರುವ ಕಡತಗಳಂತು ಗೆದ್ದಲು ಹಿಡಿದು ಮೂಲೆ ಗುಂಪಾಗಿವೆ ಈ ಒಂದು ದಿಸೆಯಲ್ಲಿ ಹೆಳವರ ಕಡತಗಳನ್ನು ಸಂಗ್ರಹಿಸಿ ಅಭ್ಯಸಿಸಿ ಅವುಗಳ ನೆರವಿನಿಂದ ನಾಡಿನ ಚರಿತ್ರ ಮುಂತಾದವುಗಳನ್ನು ಬೆಳಕಿಗೆ ತರಲು ಸಾಧ್ಯವೇ? ಎಂಬಿತ್ಯಾದಿ ವಿಷಯಗಳ ಬಗ್ಗೆ ಹೆಳವರ ಕಡತಗಳ ಬಗ್ಗೆ ಇನ್ನು ಹೆಚ್ಚಿನ ಅಧ್ಯಯನದ ಅಗತ್ಯವಿದೆ.

ಒಟ್ಟಾರೆ ಹೇಳುವುದಾದರೆ ಔದ್ಯೋಗಿಕ ಸಾಮಾಜಿಕ ಕ್ರಾಂತಿಯಿಂದಾಗಿ ಮತ್ತು ಪಾಶ್ಚಿಮಾತ್ಯರ ಪ್ರಭಾವದಿಂದಾ ನಮ್ಮ ಜೀವನ ಮತ್ತು ದಿನನಿತ್ಯದ ಆಗು ಹೋಗುಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಇಂದು ಪ್ರಜಾಪ್ರಭುತ್ವದ ಹಿನ್ನಲೆಯಲ್ಲಿ ಹಿಂದೂಳಿದ ಎಲ್ಲಾ ವರ್ಗಗಳಿಗೆ ಸಿಗುತ್ತಿರುವ ಸಹಾಯ ಸೌವಲ್ತುಗಳಿಗೆ ಹೆಳವರು ವಂಚಿತರಾಗದಂತೆ ನೋಡಿಕೊಳ್ಳುವ ಜವಾದ್ಬಾರಿ ಎಲ್ಲರದ್ದೂ ಆದರೆ ದೀಪದ ಬುಡದಲ್ಲಿ ಕತ್ತಿಎಯಂತೆ ಹೆಳವರ ಸ್ಥಿತಿಯಾಗಿದೆ ಬುಡಕ್ಕೂ ಬೆಳಕು ಬೀಳದಿದ್ದರೆ ಬಡವಾ ನೀ ಮುಡಗಿದಂಗಿರು ಎನ್ನುವ ಸೋಚನಿಯ ಸ್ಥಿತಿ ಪರಿಹಾರವಾಗುವ ಬಗೆ ತೋರಿತೇ?



# ಫೋಟೋಗಳು





ಶ್ರೀ ಶ್ರೀ ಶ್ರೀ ಬಸವ ಭೃಂಗೇಶ್ವರ ಸ್ವಾಮಿಗಳು ಹಳವ ಸಮಾಜದ ಧರ್ಮ ಗುರುಗಳು



ಹೆಳವರ ಆಶ್ರಯದಾತ ಬಸವಣ್ಣ ನೀಡಿದ ನಂದಿಯನ್ನು ಅಖಿಲ ಕರ್ನಾಟಕ ಹೆಳವ 'ಚಿನ್ಹೆಯಾಗಿ' ಗುರುತಿಸಿಕೊಂಡಿದೆ.





ವಧುವಿನ ಕಡೆಯವರನ್ನು ಎದುರುಗೊಳ್ಳುತ್ತಿರುವ ಫೋಟೋ



ವಧುವಿಗೆ ವರನು ಅರಿಷಿನ ಹಚ್ಚುತ್ತಿರುವ ಫೋಟೋ



ಸುರುಗಿ ನೀರು ಹಾಕಿಕೊಳ್ಳಲು ಸುರುಗಿ ಸುತ್ತುತ್ತಿರುವ ಫೋಟೋ



ವಧು–ವರರು ಸುರುಗಿ ನೀರು ಹಾಕಿಕೊಂಡು ಹೊಸ ಬಟ್ಟೆ ಧರಿಸುತ್ತಿರುವ ಫೋಟೋ



ವದು–ವರರ ಅಕ್ಷತೆಯ ನಂತರ ಊಟ ಮಾಡುತ್ತಿರುವ ಫೋಟೋ



ವಧು–ವರರ ನಿಶ್ಚಿತಾರ್ಥ ಕಾರ್ಯಕ್ರಮದಲ್ಲಿ ತೆಗೆದಿರುವ ಫೋಟೋ

# ಆಧಾರ ಗ್ರಂಥಗಳು


೧) ಡಾ.ಹರಿಲಾಲ ಪವಾರ:- ಹೆಳವರ ಸಂಸ್ಕೃತಿ-೧೯೯೩.

೨) ಎಚ್.ಎಲ್.ನಾಗೇಗೌಡ:- ಹೆಳವರು ಮತ್ತು ಅವರ ಕಾವ್ಯಗಳು-೨೦೦೫

೩) ಎ.ಎಸ್.ಪ್ರಭಾಕರ:- 'ಹೆಳವರು-೨೦೧೦'

೪) ಡಾ.ದೇವೇಂದ್ರಕುಮಾರ ಹಕಾರಿ:- ಹಬ್ಬ ಮತ್ತು ಆಚರಣೆಗಳು, ಸ್ವರೂಪ ವ್ಯಾಪ್ತಿ ಮತ್ತು ದರ್ಶನ ಭಾಗ್ಯ-೧೯೮೨.

೫) ರಾಜಶೇಖರ ಪಿ.ಕೆ : ಹೆಳವರು ಜಾನಪದ ಸಂಭ್ರಮ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೮೦

೬) ಬಿ.ಎಂ.ತೆಳಗಡಿ : ಹೆಳವರು ಜಾನಪದ ಸಾಹಿತ್ಯ ದರ್ಶನ ಭಾಗ-೧೬ ಕನ್ನಡ ಅಧ್ಯಯನ ಅಧ್ಯಯನ ಪೀಠ, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ.

೭) ಡಾ.ಜಿ.ಪರಮಶಿವಯ್ಯ : ಹೆಳವರ ಕಾವ್ಯಗಳು,

೮) ಶಂಭಾ ಜೋಶಿ : ಕರ್ನಾಟಕ ಇತಿಹಾಸ ದರ್ಶನ

೯) ಶಂಭಾ ಜೋಶಿ : ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ


